# ನಿನಗೆ ನನ್ನ ಲೇಖ




ಗ್ರಂಥಕರ್ತ : ತ್ರಿಮತ ಏಕೈಕ ಗುರುವು

ಆಧ್ಯಾತ್ಮಿಕ ಸಾಮ್ರಾಜ್ಯ ಚಕ್ರವರ್ತಿ, (82) ದಶ ಸಪ್ತಾಧಿಕ ಗ್ರಂಥಕರ್ತ

ಇಂದೂ ಜ್ಞಾನ ಧರ್ಮಪ್ರದಾತ, ಸಂಚಲನಾತ್ಮಕ ರಚಯಿತ, ತ್ರೈತ ಸಿದ್ಧಾಂತ ಆದಿಕರ್ತ

**ಶ್ರೀಶ್ರೀಶ್ರೀ ಆಚಾರ್ಯ ಪ್ರಬೋಧಾನಂದ ಯೋಗೀಶ್ವರರು**



www.thraithashakam.org





# ನಿನಗೆ ನನ್ನ ಲೇಖ

<u>ರಚಿತ</u>


**ತ್ರಿಮತ ಏಕೈಕ ಗುರುವು**

ಆಧ್ಯಾತ್ಮಿಕ ಸಾಮ್ರಾಜ್ಯ ಚಕ್ರವರ್ತಿ, (82) ದಶ ಸಪ್ತಾಧಿಕ ಗ್ರಂಥಕರ್ತ

ಇಂದೂ ಜ್ಞಾನ ಧರ್ಮಪ್ರದಾತ, ಸಂಚಲನಾತ್ಮಕ ರಚಿತ, ತ್ರೈತ ಸಿದ್ಧಾಂತ ಆದಿಕರ್ತ

**ಶ್ರೀಶ್ರೀಶ್ರೀ ಆಚಾರ್ಯ ಪ್ರಬೋಧಾನಂದ ಯೋಗೀಶ್ವರರು**

---

ತೆಲುಗುನಿಂದ ಕನ್ನಡಕ್ಕೆ ಅನುವಾದ

**ಇಂದೂಶ್ರೀ ಕವಿತ, ಇಂದೂಶ್ರೀ ಶ್ರೀದೇವಿ**


---





<u>ಗ್ರಂಥ ಮುದ್ರಣ</u>

**ಇಂದೂ ಜ್ಞಾನ ವೇದಿಕೆ** (Regd. No : 168/2004)

(Estd. in 1978 - Regd.No.: 168/2004)

ತ್ರೈತ ಶಕ : 38 ಪ್ರಥಮ ಮುದ್ರಣ : ನವೆಂಬರ್ –2016

ಪ್ರತಿಗಳು : 1000 **ಬೆಲೆ. 60/–**

## ಇಂದೂ ಜ್ಞಾನವೇದಿಕೆ ಪ್ರಕಟಣೆಗಳು

01. ತ್ರೈತ ಸಿದ್ಧಾಂತ ಭಗವದ್ಗೀತೆ.
02. ಆಧ್ಯಾತ್ಮಿಕ ಪ್ರಶ್ನೆ–ಉತ್ತರಗಳು.
03. ಧರ್ಮ–ಅಧರ್ಮ.
04. ಇಂದೂತ್ವವನ್ನು ಕಾಪಾಡೋಣ.
05. ಯಜ್ಞಗಳು (ಸತ್ಯವಾ–ಅಸತ್ಯವಾ?)
06. ದೆವ್ವಗಳಹಾಗೂ–ಭೂತಗಳ ಯಥಾರ್ಥಸಂಘಟನೆಗಳು.
07. ಸತ್ಯಾನ್ವೇಷಣಾ ಕಥೆ.
08. ಮಂತ್ರ–ಮಹಿಮೆ (ಸತ್ಯವಾ–ಅಸತ್ಯವಾ)
09. ಶ್ರೀ ಕೃಷ್ಣನು ದೇವರಾ, ಭಗವಂತನಾ.
10. ಗೀತಾ ಪರಿಚಯ.
11. ಕಲಿಯುಗ (ಎಂದಿಗೂ ಯುಗಾಂತವಲ್ಲ).
12. ಜನನ ಮರಣ ಸಿದ್ಧಾಂತ.
13. ಮರಣ ರಹಸ್ಯ.
14. ಪುನರ್ಜನ್ಮ ರಹಸ್ಯ.
15. ತ್ರೈತಾಕಾರ ರಹಸ್ಯ (ತ್ರೈತಾಕಾರ ಬೆರ್ಮುಡಾ).
16. ಕಥೆಗಳ ಜ್ಞಾನ.
17. ಗಾದೆಗಳ ಜ್ಞಾನ.
18. ಒಗಟುಗಳಲ್ಲಿ ಜ್ಞಾನ.
19. ತತ್ತ್ವಗಳ ಜ್ಞಾನ.
20. ಬೈಗುಳಲ್ಲಿ ಜ್ಞಾನ– ಆಶೀರ್ವಾದಗಳಲ್ಲಿ ಅಜ್ಞಾನ.
21. ಗೀತಂ–ಗೀತ (ಹಾಡುಗಳ ಜ್ಞಾನ).
22. ತತ್ತ್ವಾರ್ಥ ಗೊಂಬೆಗಳ ಜ್ಞಾನ.
23. ದೇವಾಲಯ ರಹಸ್ಯಗಳು.
24. ಇಂದೂ ಸಂಪ್ರದಾಯಗಳು.
25. ನಮ್ಮ ಹಬ್ಬಗಳು. (ಹೇಗೆ ಮಾಡಬೇಕೋ ತಿಳಿದಿದೆಯಾ?)
26. ಜ್ಯೋತಿಷ್ಯಶಾಸ್ತ್ರ (ಶಾಸ್ತ್ರವಾ–ಅಶಾಸ್ತ್ರವಾ?)
27. ತಾಯಿ ತಂದೆ.
28. ಗುರುಪ್ರಾರ್ಥನಾಮಂಜರಿ.
29. ತ್ರೈತಾರಾಧನೆ.
30. ಸಮಾಧಿ.
31. ಪ್ರಬೋಧ.
32. ಸುಬೋಧ.
33. ಪ್ರಸಿದ್ಧ ಬೋಧನೆ.
34. ಸುಪ್ರಸಿದ್ಧಬೋಧನೆ.
35. ಸಿಲುಬೆ ದೇವರಾ?
36. ಮತಾತೀತ ದೇವರ ಮಾರ್ಗ.
37. ದೇವರ ಗುರುತು–963.
38. ಮತ–ಪಥ.
39. ಪ್ರಬೋಧಾನಂದ ನಾಟಕಗಳು.
40. ಇಂದೂ ಕ್ರೈಸ್ತವನಾ?
41. ನಿಗೂಢ ತತ್ತ್ವಾರ್ಥ ಬೋಧಿನಿ.
42. ಆತ್ಮ ಲಿಂಗಾರ್ಥ.
43. ನಾಸ್ತಿಕರು–ಆಸ್ತಿಕರು.
44. ಹೇತುವಾದ–ಪ್ರತಿವಾದ.
45. ಗುತ್ತಾ.
46. ಪ್ರಬೋಧ ತರಂಗಗಳು.
47. ತ್ರೈತ ಸಿದ್ಧಾಂತ.
48. ರೂಪ ಬದಲಾದ ಗೀತೆ.
49. ಉಪನಿಷತ್‌ಗಳಲ್ಲಿ ಲೋಪಗಳು.
50. ಪ್ರಥಮ ದೈವಗ್ರಂಥ ಭಗವದ್ಗೀತೆ.
51. ದ್ರಾವಿಡ ಬ್ರಾಹ್ಮಣ.
52. ತೀರ್ಪು.
53. ಕರ್ಮಪತ್ರ.
54. ಪ್ರವಕ್ತರು ಯಾರು?
55. ಧರ್ಮಶಾಸ್ತ್ರ ಯಾವುದು?
56. ಮತಾಂತರ ದೈವದ್ರೋಹ.

# ಯೋಗೀಶ್ವರರ ಸಂಚಲನಾತ್ಮಕ ತ್ರಿಮತ ಆಧ್ಯಾತ್ಮಿಕ ರಚನೆಗಳು

## ಇಂದೂ ಜ್ಞಾನವೇದಿಕೆ ಪ್ರಕಟಣೆಗಳು

57. ತ್ರೈತಶಕ ಪಂಚಾಂಗ.
58. ತ್ರೈತ ಸಿದ್ಧಾಂತ ಆಧ್ಯಾತ್ಮಿಕ ಘಂಟು.
59. ಜೀಹಾದ್ ಎಂದರೇ ಯುದ್ಧವಾ?
60. ಮೂರು ಗ್ರಂಥಗಳು, ಇಬ್ಬರು ಗುರುಗಳು.
61. ದೇವರ ಜ್ಞಾನ ಕಬ್ಜಾ ಆಗಿದೆ.
62. ಅಜ್ಞಾನದಲ್ಲಿ ಉಗ್ರವಾದ ಬೀಜಗಳು.
63. ವಾರ್ತಕನು-ವರ್ತಕನು.
64. ದೇವರ ಚಿಹ್ನೆ.
65 ಯಾವುದು ನಿಜವಾದ ಜ್ಞಾನ?
66. ಪ್ರತಿಮೆ X ವಿಗ್ರಹ - ದೈವ X ದೆವ್ವ.
67. ಮರಣದ ನಂತರ ಜೀವನ.
68. ಯಾವ ಮತದಲ್ಲಿ ಎಷ್ಟು ಮತ ದ್ವೇಷ.
69. ಸ್ವರ್ಗ ಇಂದ್ರಲೋಕವಾ! ನರಕ ಯಮರಾಜ್ಯವಾ!!
70. ಮಧ್ಯಮ ದೈವಗ್ರಂಥದಲ್ಲಿ ಜ್ಞಾನವಾಕ್ಯಗಳು.
71. ಅಂತಿಮ ದೈವಗ್ರಂಥದಲ್ಲಿ ಜ್ಞಾನವಾಕ್ಯಗಳು.
72. ಅಂತಿಮ ದೈವಗ್ರಂಥದಲ್ಲಿ ಜ್ಞಾನವಾಕ್ಯಗಳು (ಎರಡನೇ ಭಾಗ)
73. ಹಿಂದೂ ಮತದಲ್ಲಿ ಸಿದ್ಧಾಂತಕರ್ತರು.
74. ಒಂದು ಮಾತು ಮೂರು ಗ್ರಂಥಗಳು.
75. ಲೂ ಎಂದರೇ ಏನು? (ತೆಲುಗು)
76. ಆದಿತ್ಯ.
77. ಗಿಡ ಮೊದಲಾ! ಬೀಜ ಮೊದಲಾ?
78. ಒಬ್ಬನೇ ಇಬ್ಬರು.
79. ಸಾಯಿಬಾಬಾ ದೇವರಾ! ಅಲ್ಲವಾ!
80. ಯೇಸು ಮರಣಿಸಿದ್ದಾನಾ? ಹತವಾಗಿದ್ದಾನಾ?
81. ದೇವರ ಆಗಮನಕ್ಕೆ ಇದು ಸಮಯವಲ್ಲವೇ!
82. ವಿಶ್ವ ವಿದ್ಯಾಲಯ
83. ಕೃಷ್ಣ ಮೂಸ (ಶ್ರೀ ಕೃಷ್ಣ ಮರಣದ ನಂತರ ಜೀವನ)
84. ಒರೆಗಲ್ಲು (ಗೀಟುರಾಯಿ)
85. ಮೂರು ದೈವ ಗ್ರಂಥಗಳು-ಮೂರು ಪ್ರಥಮ ವಾಕ್ಯಗಳು
86. ಹೇತುವಾದ ಪ್ರಶ್ನೆಗಳು-ಸತ್ಯವಾದ ಉತ್ತರಗಳು
87. ದೈವಗ್ರಂಥಗಳಲ್ಲಿ ಸತ್ಯಾಸತ್ಯ ವಿಚಕ್ಷಣೆ



# ಯೋಗೀಶ್ವರರ ಸಂಚಲನಾತ್ಮಕ ತ್ರಿಮತ ಆಧ್ಯಾತ್ಮಿಕ ತೆಲುಗು ಪ್ರಸಂಗಗಳು

**DVD's**

01. ಸಂತಕಮು.
02. ಸಾಂಪ್ರದಾಯಮು.
03. ತ್ರೈತಶಕಮು.
04. ಕೋಡಿಪುಂಜು–ಪಾದರಸಮು.
05. ಯುಗಮು–ಯೋಗಮು.
06. ನೈಜಂ–ಸಹಜಂ.
07. ಆತ್ಮಕು ವೆಂಟ್ರುಕ ಗುರ್ತು.
08. ಪೈತ್ಯಂ–ಸೈತ್ಯಂ.
09. ಶೈವಮು–ವೈಷ್ಣವಮು.
10. ಇಂದೂಮಹಾಸಮುದ್ರಂ.
11. ಸೃಷ್ಠಿ–ಸೃಷ್ಠಿಕರ್ತ.
12. ಕಾಯ–ಪಂಡು–ಕಾಯ.
13. ಜ್ಞಾನಮು–ವಿಜ್ಞಾನಮು.
14. ವಾರ–ಮಾಸ–ವತ್ಸರ.
15. ಸೇಕೂವಲಿ–ಕೂಲಿಸೇವಾ.
16. ಧರ್ಮಮು–ಅಧರ್ಮಮು.
17. ಏಕ್‌ನಿರಂಜನ್–ಅಲಕ್‌ನಿರಂಜನ್.
18. ಗುರುವುಲೇನಿವಿದ್ಯ–ಗ್ರುಡ್ಡಿವಿದ್ಯ.
19. ಬಟ್ಟತಲ.
20. ಭಗವಂತುಡು.
21. ದ್ರಾವಿಡುಲು – ಆರ್ಯುಲು.
22. ಪ್ರಭುವು – ಪ್ರಭುತ್ವಂ.
23. ಭೂತಂ – ಮಹಾಭೂತಂ.
24. ಪ್ರಭು – ಪ್ರಜ.
25. ಯಾದವ್.
26. ಪುಸ್ತಕಮು–ಗ್ರಂಥಮು.
27. ವೆಲುಗುಬಂಟು.
28. ಪ್ರಕೃತಿ–ವಿಕೃತಿ.
29. ಮಾಟ–ಮಂದು.
30. ಏಕತ–ಏಕಾಗ್ರತ.
31. ಹರಿಕಾಲು–ಹರಿಚೇಯಿ.
32. ಪುಟ್ಟಿಗೋಸಿ–ಮೊಲತ್ರಾಡು.
33. 1 2 3 ಗುರುಪೌರ್ಣಮಿ.
34. ಚಮತ್ಕಾರ–ಆತ್ಮ.
35. ಕ್ಷಮಿಂಚರಾನಿ ಪಾಪಮು.
36. ಮಾಯಕುಡು–
    ಅಮಾಯಕುಡು.
37. ಮರಣಮು–ಶರೀರಮು.
38. ದ್ವಿತೀಯುಡು–ದ್ವಿತೀಯುಡು.
39. ಎದಮೀದಮುದ್ರ–
    ತಲ್ಲಿ ತಂಡ್ರಿ ಗುರ್ತು.
40. ಸೇವಾಶಾತಮು.
41. ಬಯಟಿ ಸಮಾಜಂ–
    ಲೋಪಲಿ ಸಮಾಜಂ.
42. ಶ್ರೀಕೃಷ್ಣಾಷ್ಟಮಿ.
43. ಪ್ರಪಂಚ ಶ್ರದ್ಧ–
    ಪರಮಾತ್ಮ ಶ್ರದ್ಧ.
44. ತಲ್ಲಿ ತಂಡ್ರಿ
45. ದೇವುನಿ ಜ್ಞಾನಮು–
    ಮಾಯ ಮಹತ್ಯಮು.
46. ಸಮಾಧಿ.
47. ತಲ್ಲಿ ತಂಡ್ರಿ –
    ಗುರುವು ದೈವಮು.
48. ಕಲಿಯುಗಮು.
49. ಮತಮು–ಪಥಮು.
50. ದಿವ್ಯಖುರಾನ್–ಹದೀಸು.
51. ತಲ್ಲಿ.
52. ಪುಟ್ಟುಟ – ಗಿಟ್ಟುಟ.
53. ಗೋರು – ಗುರು.
54. ಆತ್ಮ.
55. ಕರ್ಮ ಮರ್ಮಮು.
56. ತಾತ.
57. ಗುರುಪೌರ್ಣಮಿ.
58. ಯೋಗೀಶ್ವರುಲ
    ಜನ್ಮದಿನ ಸಂದೇಶಮು.
59. ಶ್ರೀಕೃಷ್ಣಜನ್ಮ ಮಧುರ.
60. ಇಂದುವು – ಹಿಂದುವು.
61. ಸ್ತ್ರೀ–ಪು/ಲಿಂಗಮು.

# ಯೋಗೀಶ್ವರರ ಸಂಚಲನಾತ್ಮಕ ತ್ರಿಮತ ಆಧ್ಯಾತ್ಮಿಕ ತೆಲುಗು ಪ್ರಸಂಗಗಳು

**DVD's**

62. ಆತ್ಮಪನಿ.
63. ತ್ರೈತ ಸಿದ್ಧಾಂತಮು.
64. ದೇಶಂ ಮೋಸಂ – ದೇಹಂ ಮೋಹಂ.
65. ಜೀರ್ಣ+ಆಶಯಮು.
66. ಮೇಘಂ ಒಕಭೂತಂ– ರೋಗಂ ಒಕಭೂತಂ.
67. ದೇವುನಿಕಿ ಮತಮುನ್ನದಾ?
68. ಸಹಜ ಮರಣಂ–ತಾತ್ಕಾಲಿಕ ಮರಣಂ
69. ಅಧರ್ಮ ಆರಾಧನಲು.
70. ಏದಿ ಧರ್ಮಮು.
71. ನಿದರ್ಶ – ನಿರೂಪ.
72. ಪುಟ್ಟಿನರೋಜು ಎವ್ವರಿಕೀ ರಾದು.
73. ನಟಿಂಚೇ ಆತ್ಮ.
74. ಮೂಡು ಪುಟ್ಟುಕಲು– ರೆಂಡು ಜಾಗಾಲು.
75. ಶ್ರೀ ಕೃಷ್ಣುಡು ಎವರು?
76. ಸಂಚಿತ ಕರ್ಮ.
77. ಗುರುವು ಎವರು?
78. ಕರ್ಮಲೇನಿ ಕೃಷ್ಣುಡು– ಕರ್ಮಉನ್ನ ಕೃಷ್ಣುಡು.
79. ಭಯಂ.
80. ಸುಖಮು–ಆನಂದಮು.
81. ದಶ–ದಿಶಲು.
82. ಆಡಿಂಚೇ ಆತ್ಮ.
83. ಇಚ್ಛಾಧೀನ ಕಾರ್ಯಮುಲು– ಅನಿಚ್ಛಾಧೀನ ಕಾರ್ಯಮುಲು.
84. ಟಕ್ಕುಟಮಾರಾ, ಇಂದ್ರಜಾಲ ಮಹೇಂದ್ರಜಾಲ, ಗಜಕರ್ಣ ಗೋಕರ್ಣ.
85. ಸ್ವಾರ್ಥ ರಾಜಕೀಯಂ (ಸ್ವ+ಅರ್ಥ ರಾಜಕೀಯಂ).
86. ಮೂಡು ನಿರ್ಮಾಣಾಲು–ಒಕ ಪರಿಶುಭ್ರತ.
87. ಏದಿ ಶಾಸ್ತ್ರಮು?
88. ತೆಲುಗುಲೋ ಮೂಡು– ಆರು–ತೊಮ್ಮಿದಿ
89. 6–3=6
90. ಗುರ್ತಿಂಪಬಡನಿವಾಡು ಗುರುವು.
91. ಜ್ಞಾನಮು ದಗ್ಗರ ಜಾಗ್ರತ್ತ!
92. ಚಂದ್ರಾಕಾರಮು (ಬಟ್ಟತಲ).
93. ಮತಮುಲಲೋ ಪವಿತ್ರ ಯುದ್ಧಮು.
94. ಮೂಡು ಗ್ರಂಥಮುಲು.
95. ಏಡು ಆಕಾಶಮುಲು.
96. ದೈವಗ್ರಂಥಮು.
97. ಜ್ಞಾನಮು ಕಬ್ಜಾ ಅಯ್ಯಿಂದಿ.
98. ಭಕ್ತಿ–ಭಯಮು.
99. ಜ್ಞಾನಶಕ್ತಿ.
100. ಕಾಲಜ್ಞಾನ ವಾಕ್ಯಮುಲು.
101. ಅರ್ಥಮು–ಅಪಾರ್ಥಮು.
102. ತೋಲೇವಾಡು.
103. ಗುರು ಚಿಹ್ನಂ.
104. ಭಕ್ತಿ–ಶ್ರದ್ಧಲು.
105. ದೇವುಡು ಇದ್ದರಾ! ಒಕ್ಕರಾ!!
106. ಪುರುಷೋತ್ತಮ.
107. ಮತದ್ವೇಷಮು.
108. ನೀ ವೆನುಕ ವಾಡು.
109. ಗ್ರಂಥಮು – ಬೋಧ.
110. ಆಟ – ದೋಬೂಚುಲಾಟ.
111. ಪ್ರಜಲು – ಮಾನವುಲು.
112. ಆಸ್ತಿ – ದೋಸ್ತಿ
113. ದಂತಮು–ಅಂತಮು.
114. ಮಾಯ ಮರ್ಮಮು–ಆತ್ಮ ಧರ್ಮಮು
115. ಶ್ರೀಕೃಷ್ಣುಡು ಚನಿಪೋಯಾಡಾ? ಚಂಪಬಡ್ಡಾಡಾ?
116. ಅಂತಿಮ ದೈವಗ್ರಂಥಮುಲೋ ಪ್ರಥಮವಾಕ್ಯಮುಲು
117. ಅದುರು–ಬೆದುರು
118. ಆಧ್ಯಾತ್ಮಿಕ ಪ್ರಶ್ನಲು–ಜವಾಬುಲು.

**ಸೂಚನೆ :** ತೆಲುಗಿನಿಂದ ಕನ್ನಡಕ್ಕೆ ಅನುವಾದಿಸಲಾಗದ ಪದಗಳು ಹಾಗೆಯೇ ಮುದ್ರಿಸಲಾಗಿದೆ.

# ಇಂದೂ ಜ್ಞಾನವೇದಿಕೆ ಪುಸ್ತಕಗಳು ದೊರೆಯುವ ವಿಳಾಸ

## ಪ್ರಬೋಧಾಶ್ರಮ (ಶ್ರೀ ಕೃಷ್ಣಮಂದಿರ)

ಚಿನ್ನಪೊಡಮಲ (ಗ್ರಾ), ತಾಡಿಪತ್ರಿ (ಮಂ), ಅನಂತಪುರಂ (ಜಿಲ್ಲೆ). A.P

Cell : ಲಕ್ಷ್ಮಿನಾರಾಯಣಾಚಾರಿ–09440556968. ವೆಂಕಟೇಶ್–08096816963.

(ಇಂದೂ ಜ್ಞಾನ ವೇದಿಕೆ ಸದಸ್ಯರು)

**ಎ. ರಾಘವೇಂದ್ರ ಶ್ರೇಷ್ಠಿ**
ಹೊಸಪೇಟೆ, ಬಳ್ಳಾರಿ (ಜಿಲ್ಲೆ). K. A
Cell : 9611133635,
9731816452, 09440645005

**ಜಿ. ರಾಧಾಕೃಷ್ಣಾ ರೆಡ್ಡಿ**
ಪ್ರಬೋಧಾ ನಿಲಯ. ರಿಂಗ್ ರೋಡ್,
ಮರಲೂರು, ತುಮಕೂರು (ಜಿ).
ಪಿನ್–572150, Cell : 9448177812

**ಶಿವರಾಜ**
(ಸಾ)(ಕಿ) ಕುಕನೂರು, ಚಿಕ್ಕಸೂಗುರು (ತಾ),
ರಾಯಚೂರು (ಜಿ), Cell:98443 69516

**R.S. ವೀರಾಚಾರಿ**
ಕತ್ತರಗುಪ್ಪೆ, ಬೆಂಗಳೂರು–560085
Cell : 9036892829

**G. ಮನೋಹರ್**
ಮಲ್ಲಸಂದ್ರ, ಟಿ. ದಾಸರಹಳ್ಳಿ
ಬೆಂಗಳೂರು–560057
Cell : 7411459912, 9448452963.

**B. ವಾತ್ಸಲ್ಯ**
ರೈಲ್ವೇ ಸ್ಟೇಷನ್ ಹತ್ತಿರ,
ಪಿ.ಬಿ.ರೋಡ್, ದಾವಣಗೆರೆ–577002
Cell : 9901534677, 8880666529

**ಯೋಗೇಶ್.B**
ವಡ್ಡೇಪಾಲ್ಯಂ (ಗ್ರಾ),
ಕುಂದುರ್ಪಿ(ಮಂ),ಅನಂತಪುರ(ಜಿಲ್ಲಾ)
ಸೆಲ್: 9620193341, 9739228639

**ಬಸವರಾಜ ಅಂಗಡಿ**
(ಸಾ) ಪೋತ್ನಾಳ, (ತಾ) ಮಾನವಿ,
ರಾಯಚೂರು (ಜಿ)
Cell : 9632418716

**ಸೂರ್ಯ ಪ್ರಕಾಶ**
ಟೈಪ್ 'ಸಿ' (ಸಾ) (ಪೊ) ಶಕ್ತಿನಗರ
(ತಾ), ರಾಯಚೂರು (ಜಿ)
Cell : 9611183107, 9164886981

**ಲೀಲಾವತಿ**
ಜನತಾ ನಗರ, ತೊಣಚಿಕೊಪ್ಪಲ್,
ಮೈಸೂರ್–547097
Cell : 9141109799, 9986369118

**T.V. ರಮಣ**
ಓಲುಖ ಲೇಔಟ್, ರೂಪೇನಾ
ಅಗ್ರಹಾರ, ಬೆಂಗಳೂರು–560068.
Cell : 08970772028, 07411459912, 07406039453

**M. ನಾರಾಯಣರೆಡ್ಡಿ**
(Bsc census department retired supervisor)
ರಾಮಗುಂಡನಲ್ಲಿ ಪೋಸ್ಟ್, ವೈಟ್
ಫೀಲ್ಡ್ ರೋಡ್, ಬೆಂಗಳೂರು–066
Cell : 9482516023

**ಯೋಗೇಶ್**
ಸೂಲನಾಯಕನಹಳ್ಳಿ (ಗ್ರಾಮ),
ತುಮಕೂರು (ಜಿಲ್ಲೆ).
ಸೆಲ್:8762523963,9740744424

# ಯೋಗೀಶ್ವರರ ಸಂಚಲನಾತ್ಮಕ ರಚನೆಗಳ ಸಾರಾಂಶ

1. ತ್ರೈತ ಸಿದ್ಧಾಂತ ಗ್ರಂಥಗಳಲ್ಲಿ ಅಕ್ಷರ ಸಮುದಾಯವೇ, ಆತ್ಮ ಸಮಾಚಾರವಾಗಿದೆ. ತ್ರೈತ ಸಿದ್ಧಾಂತ ಗ್ರಂಥಗಳಲ್ಲಿ ಕ್ಷಯ ಅಕ್ಷಯ ಸಮಾಚಾರ, ಪರಮಾತ್ಮನ ಸಮಾಚಾರ ಇದೆ.
2. ತ್ರೈತ ಸಿದ್ಧಾಂತ ಸಂಬಂಧ ಗ್ರಂಥಗಳನ್ನು ಭೌತಿಕವಾಗಿ ಬರೆದಿರುವುದು ಯೋಗೀಶ್ವರರು. ತ್ರೈತಸಿದ್ಧಾಂತ ಅನುಬಂಧ ಗ್ರಂಥಗಳಲ್ಲಿ ಅಭೌತಿಕವಾಗಿ ಯೋಗಶಕ್ತಿ ಇದೆ.
3. ತ್ರೈತ ಸಿದ್ಧಾಂತ ಇಂದೂ (ಹಿಂದೂ) ಧರ್ಮಗಳಲ್ಲಿ ವಿಪ್ಲವಾತ್ಮಕವಾದುದು. ತ್ರೈತ ಸಿದ್ಧಾಂತ ಗ್ರಂಥದಲ್ಲಿನ ಜ್ಞಾನ ಸಂಚಲನಾತ್ಮಕವಾದುದು, ಓದಿ ನೋಡಿರಿ.
4. ತ್ರೈತ ಸಿದ್ಧಾಂತ ಲೋಕದಲ್ಲಿ ಎಲ್ಲದಕ್ಕಿಂತ ದೊಡ್ಡದು. ತ್ರೈತ ಸಿದ್ಧಾಂತ ಗ್ರಂಥಗಳು ಎಲ್ಲಾ ಗ್ರಂಥಗಳನ್ನು ಮೀರಿರುವವು. ಅದರ ರಚನಗಾರ ಯೋಗಿಗಳಿಗೆ ಈಶ್ವರನಾದ ಯೋಗೀಶ್ವರನು.
5. ತ್ರೈತ ಸಿದ್ಧಾಂತ ಗ್ರಂಥಗಳು ಕಾಣಿಸಿದರೆ ದುಷ್ಟಶಕ್ತಿಗಳು ಭಯದಿಂದ ನಡುಗುತ್ತವೆ. ತ್ರೈತ ಸಿದ್ಧಾಂತ ಗ್ರಂಥಗಳನ್ನು ಹತ್ತಿರ ಇಟ್ಟುಕೊಂಡರೆ ಯೋಗಶಕ್ತಿಗೆ ತಾಳಲಾರದೆ ಭಯಪಟ್ಟು ಹೋಗುತ್ತವೆ.
6. ತ್ರೈತ ಸಿದ್ಧಾಂತ ಜ್ಞಾನ ಭಗವದ್ಗೀತೆ ನಂತರ ಹೇಳಲಾದ ಅತ್ಯುತ್ತಮ ಜ್ಞಾನ. ತ್ರೈತ ಸಿದ್ಧಾಂತ ಗ್ರಂಥದಲ್ಲಿ ಕೃಷ್ಣನು ಮೊದಲು ಹೇಳದ ಜ್ಞಾನವನ್ನೂ ಸಹ ಯೋಗೀಶ್ವರರು ಹೇಳಿದ್ದಾರೆ.
7. ತ್ರೈತ ಸಿದ್ಧಾಂತ ಜ್ಞಾನ ಮಾನವ ಜೀವನಕ್ಕೆ ದೊಡ್ಡ ಪ್ರಕಾಶವು. ತ್ರೈತ ಸಿದ್ಧಾಂತದ ಬೆಳಕಿನೊಳಗೆ ಹೋದವನಿಗೆ ಅದು ದೈವಶಕ್ತಿ ಎಂದು ತಿಳಿಯುತ್ತದೆ.
8. ತ್ರೈತ ಸಿದ್ಧಾಂತ ಭಗವದ್ಗೀತೆಯನ್ನು ಬರೆದಿರುವುದು ಯೋಗೀಶ್ವರರು. ಆದ್ದರಿಂದ ತ್ರೈತ ಸಿದ್ಧಾಂತ ಎಂದರೆ ಏನೋ, ಅದು ಎಷ್ಟು ದೊಡ್ಡದೋ ತಿಳಿದಿದೆ.
9. ತ್ರೈತ ಸಿದ್ಧಾಂತವನ್ನು ಕುರಿತು ತಿಳಿದರೆ, ಯೋಗೀಶ್ವರರ ಗ್ರಂಥಗಳನ್ನು ಓದಿದರೆ, ಯಾವ ಮತಸ್ಥನಾದರೂ ಒಪ್ಪಿಕೊಳ್ಳುತ್ತಾನೆ, ಅದನ್ನು ಆಚರಿಸುತ್ತಾನೆ.
10. ತ್ರೈತ ಸಿದ್ಧಾಂತವನ್ನು ಪ್ರತ್ಯಕ್ಷವಾಗಿ ಭಗವಂತನು ಹೇಳಿರುವುದು. ಆದ್ದರಿಂದ ಎಲ್ಲಾ ಮತಗಳ ಸಾರಾಂಶವು ತ್ರೈತ ಸಿದ್ಧಾಂತ ಗ್ರಂಥಗಳಲ್ಲಿ ಇದೆ.
11. ತ್ರೈತ ಸಿದ್ಧಾಂತ ಗ್ರಂಥಗಳು ವ್ಯಕ್ತಿ ಬರೆದಿರುವವು ಅಲ್ಲ, ವ್ಯಕ್ತಿಯಲ್ಲಿನ ಶಕ್ತಿ ಬರೆದಿರುವವು. ಆದ್ದರಿಂದ ಎಲ್ಲ ರಹಸ್ಯಗಳೇ ಓದಿ ತಿಳಿದುಕೊಳ್ಳಿ.
12. ತ್ರೈತ ಸಿದ್ಧಾಂತ ಭಗವದ್ಗೀತೆ, ಬೈಬಲ್, ಖುರಾನ್ ಗ್ರಂಥಗಳಲ್ಲಿ ಇದೆ. ಆದರೂ ಹಿಂದೂಗಳಿಗಾಗಲಿ, ಕ್ರೈಸ್ತವರಿಗಾಗಲಿ, ಮುಸ್ಲೀಮ್‌ರಿಗಾಗಲಿ ಆ ವಿಷಯ ತಿಳಿದಿಲ್ಲ.

ತಪ್ಪದೆ ಓದಿರಿ! ಓದಿಸಿರಿ!!

## ಪ್ರಥಮ ದೈವ ಗ್ರಂಥ

# ತ್ರೈತ ಸಿದ್ಧಾಂತ ಭಗವದ್ಗೀತೆ

**(578 ಶ್ಲೋಕಗಳ ವಚನ ಗ್ರಂಥ)**

ಇದು ಆಧ್ಯಾತ್ಮಿಕ ವಿದ್ಯೆಯಲ್ಲಿ ವಿಪ್ಲವಾತ್ಮಕ ತಿರುವು ತಿರುಗಿದ ಭಗವದ್ಗೀತೆ. 55 ಶ್ಲೋಕಗಳಿಗೆ ಪೂರ್ತಿ ಭಾವನೆ ಬದಲಾವಣೆಯೊಂದಿಗೆ ತಯಾರಾಗಿದೆ. ಮೂರು ಆತ್ಮಗಳನ್ನು ಕುರಿತು ಶಾಸ್ತ್ರಾಧಾರದಿಂದ ವಿವರಿಸಿ ಬೋಧಿಸಿದ ಮೊಟ್ಟ ಮೊದಲ ಭಗವದ್ಗೀತೆ. ಮೊದಲು ಎಷ್ಟೋ ಜನರು ಬರೆದ ಭಗವದ್ಗೀತೆಗಳಿಗೆ ನೂರಕ್ಕೆ 90ರಷ್ಟು ವಿಭಿನ್ನ ಭಾವನೆಗಳಿಂದ ಕೂಡಿಕೊಂಡಿದೆ. ಎಷ್ಟೋ ಪ್ರತ್ಯೇಕ ಅರ್ಥಗಳೊಂದಿಗೆ ದೇವರು ಹೇಳಿದ ನಿಜ ಭಾವಗಳನ್ನು ಹೇತುಬದ್ಧವಾಗಿ ವಿವರಿಸಿರುವುದು ಮತ್ತು ಹೇತುವಾದಿಗಳು ಸಹ ಖಂಡಿಸಲಾರದ ಭಗವದ್ಗೀತೆ ಇದು ಒಂದೇ. ಗರ್ಭಸ್ಥ ಶಿಶುವಿಗೆ ಪ್ರಾಣ ಇಲ್ಲ ಎನ್ನುವುದು, ಹತ್ಯೆಯನ್ನು ವಿವರಿಸಿ ಆತ್ಮಹತ್ಯೆಯಾಗಿ ಹಾಗೆಯೇ ಆತ್ಮಹತ್ಯೆಯನ್ನು ಹತ್ಯೆಯಾಗಿ ಹೇಳುವುದು, ಇಂತಹವು ಬಹಳ ಜನರಿಗೆ ಸಹಿಸಿಕೊಳ್ಳಲಾರದಂತಹ ವಿಪ್ಲವಾತ್ಮಕ ಹಾಗೂ ಸಂಚಲನ ವಿಷಯಗಳೆಷ್ಟೋ ಈ ಗ್ರಂಥದಲ್ಲಿ ಇವೆ. ಶ್ರೀಕೃಷ್ಣನ ಯಥಾರ್ಥ ಭಾವನೆಯನ್ನು ತಿಳಿಸಿ, ವಾಸ್ತವ ಜ್ಞಾನ ಪಥದಲ್ಲಿ ನಡೆಸಿ, ಮೋಕ್ಷಗಮ್ಯವನ್ನು ಸೇರಿಸುವುದು ಈ ಗ್ರಂಥ ರಾಜ.

**ರಚಿತ : ತ್ರಿಮತ ಏಕೈಕ ಗುರುವು, ತ್ರೈತ ಸಿದ್ಧಾಂತ ಆದಿಕರ್ತ ಶ್ರೀಶ್ರೀಶ್ರೀ ಆಚಾರ್ಯ ಪ್ರಬೋಧಾನಂದ ಯೋಗೀಶ್ವರರು**

# ನಿನಗೆ ನನ್ನ ಲೇಖನ



ನಿನಗೆ ನನ್ನ ಲೇಖನವನ್ನು ಬರೆಯುವ ಮೊದಲು ಲೇಖ ಎಂದರೆ ಏನು? ಲೇಖವನ್ನು ಬರೆಯುವವನು ಯಾರು? ಎಂದು ತಿಳಿದಿದ್ದರೆ ನಿನಗೆ ಬಂದಿರುವ ಲೇಖನವನ್ನು ಕುರಿತು ನೀನು ಜಾಗ್ರತೆಯಾಗಿ ನೋಡುತ್ತೀಯಾ. ಬರೆದವನ ವಿಷಯ, ಲೇಖದ ವಿಷಯ ಎರಡೂ ತಿಳಿಯದಿದ್ದರೆ ಬಂದಿರುವ ಲೇಖನವನ್ನು ಜಾಗ್ರತೆಯಾಗಿ ಯಾರೂ ಓದುವುದಿಲ್ಲ. ಆದ್ದರಿಂದ ಯಾರಿಗಾದರೂ ಬಂದಿರುವ ಲೇಖನೆಯೊಂದರ ವಿಷಯವನ್ನು ಕುರಿತು ತಿಳಿದಿರಬೇಕಾಗಿರುತ್ತದೆ. ಬರೆದವನು ಯಾರಾಗಿರುವುದು ಲೇಖನದಲ್ಲಿ ಏನಿದೆಯೋ ಸ್ವಲ್ಪ ತಿಳಿದಾಗ ಲೇಖನದ ಮೇಲೆ ಮನೋಧ್ಯಾಸ, ಬುದ್ಧಿ ಶ್ರದ್ಧೆ ಎರಡೂ ಉಂಟಾಗುತ್ತದೆ. ದೇಶದಲ್ಲಿನ ಯಾರಾದರೂ ಯಾರಿಗಾದರೂ ಲೇಖನವನ್ನು ಬರೆಯಬಹುದು. ಮುಖ್ಯವಾಗಿ ಇಬ್ಬರ ನಡುವಿನ ಸಮಾಚಾರ ಸಂಬಂಧವನ್ನು ಉಂಟು ಮಾಡುವುದೇ ಲೇಖ. ಯಾರು ಯಾರಿಗಾದರೂ ಯಾವ ಸಮಾಚಾರ ವನ್ನಾದರೂ ಬರೆಯಬಹುದು. ಒಬ್ಬರಿಗೊಬ್ಬರು ಲೇಖವನ್ನು ಬರೆಯುವ ಮನುಷ್ಯರು ಬದಲಾಗಬಹುದು. ಲೇಖದಲ್ಲಿನ ಸಮಾಚಾರ ಬದಲಾಗಬಹುದು. ಆದರೂ **ಲೇಖ'** ಎನ್ನುವ ಹೆಸರು ಬದಲಾಗುವುದಿಲ್ಲ. ಲೇಖವನ್ನು **'ಉತ್ತರ'**. **'ಜಾಬು'** ಎನ್ನುವ ಎರಡು ಹೆಸರುಗಳಿಂದ ಕರೆದರೂ 'ಲೇಖ' ಎನ್ನುವುದು ಪ್ರತ್ಯೇಕವಾದ ಹೆಸರಾಗಿ ಇದೆ.

'ಲಿಪಿ' ಎಂದರೆ ಬರೆಯಲ್ಪಡುವ ಅಕ್ಷರಗಳೆಂದು ಅರ್ಥ. ಲಿಪಿಯಿಂದ 'ಲಿಖಿತ' ಎನ್ನುವ ಪದ ಏರ್ಪಟ್ಟಿದೆ. ಲಿಖಿತ ಎಂದರೆ 'ಬರಹ' ಎಂದು ಅರ್ಥ. ಲಿಖಿಸುವುದು ಎಂದರೆ ಬರೆಯುವುದು ಎಂದು ಅರ್ಥ. ಲಿಪಿಯಿಂದ ಲಿಖಿ, ಲಿಖಿಯಿಂದ 'ಲೇಖ' ಎನ್ನುವ ಪದ ಹುಟ್ಟಿದೆ. ಲೇಖ ಎಂದರೆ ಬರೆಯಲ್ಪಡುವುದೆಂದು ಅರ್ಥ. ಲೇಖ ಎಂದರೆ ಬರೆಯಲ್ಪಡುವುದಾದರೂ ಲೇಖನಗಳು ಎರಡು ವಿಧಗಳಾಗಿ ಇವೆ. ಇದನ್ನು ಕುರಿತು ಚೆನ್ನಾಗಿ ಆಲೋಚಿಸಿದ ಹಿರಿಯರು ಲೇಖವನ್ನು ಎರಡು ವಿಧಗಳಾಗಿ ವಿಭಜಿಸಿ ಒಂದು ವಿಧವನ್ನು 'ಜಾಬು' ಎಂದೂ, ಎರಡನೆ ವಿಧವನ್ನು 'ಉತ್ತರ' ಎಂದು ಹೆಸರು ಇಡುವುದಾಗಿದೆ. ಪೂರ್ವದ ಜ್ಞಾನಿಗಳಾದವರ ಉದ್ದೇಶವನ್ನು ಅನುಸರಿಸಿ ಜಾಬು ಎಂದರೆ

ಅರ್ಥವೇನೋ? ಉತ್ತರ ಎಂದರೆ ಏನೊ? ಯಾರಿಗೂ ತಿಳಿಯದಂತೆ ಹೋಗಿದೆ. ತಿಂದಿರುವುದು ಹೊಟ್ಟೆಯಲ್ಲಿ ಸ್ವಲ್ಪಸಮಯಕ್ಕೆ ಜೀರ್ಣವಾಗಿಹೋದಂತೆ, ಇರುವುದು ಕಾಲದಲ್ಲಿ ಸ್ವಲ್ಪ ಕಾಲಕ್ಕೆ ಇಲ್ಲದಂತೆ ಹೋಗುತ್ತದೆ.

**ತಿಂದಿರುವುದು ಹೊಟ್ಟೆಯಲ್ಲಿ ಸ್ವಲ್ಪಸಮಯಕ್ಕೆ ಜೀರ್ಣವಾಗಿ ಹೋಗುತ್ತದೆ**
**ಇದು ಶರೀರ ಧರ್ಮ.**

**ಇರುವುದು ಕಾಲದಲ್ಲಿ ಸ್ವಲ್ಪಕಾಲಕ್ಕೆ ಇಲ್ಲದಂತೆ ಹೋಗುತ್ತದೆ**
**ಇದು ಪ್ರಕೃತಿ ಧರ್ಮ.**

ಜಾಬು ಎನ್ನುವ ಹೆಸರನ್ನು, ಉತ್ತರ ಎನ್ನುವ ಹೆಸರನ್ನು 25 ವರ್ಷಗಳ ಕೆಳಗೆ ಎಲ್ಲರೂ ಕೇಳಿಯೇ ಇರುತ್ತಾರೆ. ಆಗ ಸಮಾಚಾರವನ್ನು ಸೇರಿಸುವ ಸಾಧನೆಗಳಲ್ಲಿ ಲೇಖಗಳು ಮುಖ್ಯವಾದ ಪಾತ್ರವನ್ನು ಪೋಷಿಸಿವೆ. ಕಳೆದ 25 ವರ್ಷಗಳ ಕೆಳಗೆ ಪೋಸ್ಟಾಫೀಸುಗಳು (ಅಂಚೆ ಕಾರ್ಯಾಲಯಗಳು) ಮನುಷ್ಯರು ಬರೆದ ಲೇಖಗಳನ್ನು ಒಂದು ಕಡೆಯಿಂದ ಮತ್ತೊಂದುಕಡೆಗೆ ಸೇರಿಸುತ್ತಿದ್ದವು. ಆಗ ಪೋನ್ ಸೌಕರ್ಯ ಇಲ್ಲದಿರುವುದರಿಂದ ಎಲ್ಲರೂ ಲೇಖಗಳ ಮೂಲಕವೇ ಸಮಾಚಾರವನ್ನು ಒಂದು ಪ್ರಾಂತದಿಂದ ಮತ್ತೊಂದು ಪ್ರಾಂತ್ಯಕ್ಕೆ ಕಳಿಸುತ್ತಿದ್ದರು. **"ಇರುವುದು ಸ್ವಲ್ಪ ಕಾಲಕ್ಕೆ ಇಲ್ಲದಂತೆ ಹೋಗುತ್ತದೆ"** ಎನ್ನುವ ಪ್ರಕೃತಿ ಧರ್ಮದ ಪ್ರಕಾರ ಇರುವ ಅಂಚೆ ಕಾರ್ಯಲಯಗಳಿಗೆ ಕೆಲಸ ಇಲ್ಲದಂತಾಗಿದೆ. ನಡೆಯುತ್ತಿರುವ ಲೇಖಗಳು ನಡೆಯದಂತೆ ಹೋಗಿವೆ. ಈದಿನ ಪ್ರತಿ ಮನುಷ್ಯನ ಹತ್ತಿರ ಪೋನ್ ಇರುವುದರಿಂದ ಯಾರಿಗೂ ಲೇಖೆಯೊಂದಿಗೆ ಕೆಲಸ ಇಲ್ಲದಂತೆಹೋಗಿದೆ. ಬರಹ ರೂಪವಿರುವ ಸಾಕ್ಷ್ಯ ಅಗತ್ಯವಾದ ಸಂದರ್ಭದಲ್ಲಿ ಮಾತ್ರ ತಪ್ಪದೆ ಲೇಖನವನ್ನು ಬರೆಯುತ್ತಿದ್ದಾರೆ. ತೆಲುಗು ಭಾಷೆಯಲ್ಲಿ 'ಲೇಖ' ಎನ್ನುವುದು ಮೊದಲು 'ಲಿಪಿ'ಯಿಂದ ಹುಟ್ಟಿಬಂದಿದೆಯೆಂದು ಹೇಳಿಕೊಂಡಿದ್ದೇವೆ. ಒಂದುಸಮಯದಲ್ಲಿ ತೆಲುಗುಭಾಷೆ ಅನೇಕ ದೇಶಗಳಲ್ಲಿ ಪ್ರಪಂಚ ವ್ಯಾಪ್ತವಾಗಿ ಇತ್ತೆಂದು ಕೆಲವು ಸಂದರ್ಭಗಳಲ್ಲಿ ನಾವು ಹೇಳಿದ್ದೇವೆ. ತೆಲುಗುಭಾಷೆಯಲ್ಲಿ 'ಲಿಪಿ' ಎನ್ನುವ ಪದವನ್ನು ಆಧಾರ ಮಾಡಿಕೊಂಡು ಆಂಗ್ಲಭಾಷೆಯಲ್ಲಿ

ಲೇಖನವನ್ನು 'ಲೇಟರ್' ಎಂದು ಹೇಳಿಕೊಳ್ಳುತ್ತಿದ್ದಾರೆ. ಲಿಪಿಯಿಂದ ಬದಲಾವಣೆಮಾಡಿ 'ಲೇಖ' ಎಂಬ ಪದವನ್ನು ನಾವು ಬರೆದಾಗ, ಆಂಗ್ಲಭಾಷೆ ಯಲ್ಲಿ ಅಕ್ಷರ ರೂಪದಲ್ಲಿರುವ ಲಿಪಿಯನ್ನು 'ಲೇಖ' ಎಂದು ನಾವು ಹೇಳಿ ಕೊಂಡಂತೆ ಹೇಳಿಕೊಳ್ಳದೇ ಲೇಖನವನ್ನು 'ಲೇಟರ್' ಎಂದು ಹೇಳಿಕೊಂಡಿದ್ದಾರೆ. ಲೇಟರ್ ಎಂದರೆ 'ಅಕ್ಷರ' ಎಂದು ಅರ್ಥ. ಲಿಪಿ ಎಂದರೆ ಬರೆಯುವ ಅಕ್ಷರ ಎಂದು ಅರ್ಥ. ಆಂಗ್ಲೇಯರು ಅಕ್ಷರಗಳಿಂದ ಬರೆಯುವ ಲೇಖನವನ್ನು ಅಕ್ಷರಗಳ ಗುರುತಾಗಿ 'ಲೇಟರ್' ಎಂದಿದ್ದಾರೆ. ಅಕ್ಷರವನ್ನು 'ಲೇಟರ್' ಎನ್ನುತ್ತಾರೆ, ಹಾಗೆ ಲೇಖನವನ್ನು ಸಹ 'ಲೇಟರ್' ಎನ್ನುತ್ತಾರೆ. ಆಂಗ್ಲಭಾಷೆಯನ್ನು ಮೊದಲು ಬರೆಯುವಾಗಲೇ ಈ ತಪ್ಪನ್ನು ಅವರು ಮಾಡಿದ್ದಾರೆಂದು ತಿಳಿಯುತ್ತಿದೆ. ತೆಲುಗಿನಲ್ಲಿ ಲಿಪಿ, ಲಿಖಿ, ಲೇಖ ಎಂಬ ಮೂರು ಬದಲಾವಣೆಗಳು ಬಂದರೆ, ಆಂಗ್ಲಭಾಷೆಯಲ್ಲಿ 'ಲೇಟರ್'ನನ್ನು ಬದಲಾವಣೆ ಮಾಡದಂತೆ 'ಲೇಟರ್' ಎಂದೇ ಹೇಳಿದ್ದಾರೆ.

**ಪ್ರಶ್ನೆ :– ತೆಲುಗುಭಾಷೆಯಲ್ಲಿ ಹೇಳುವ ಲೇಖನವನ್ನು ಜಾಬು ಎಂದೂ, ಉತ್ತರ ಎಂದೂ ಏಕೆ ಎರಡು ವಿಧಗಳಾಗಿ ಹೇಳುತ್ತಿದ್ದಾರೆ. ಹಾಗೆ ಹೇಳುವುದರಲ್ಲಿ ಅರ್ಥವೇನಾದರೂ ಇದೆಯಾ?**

**ಉತ್ತರ :–** ಲೇಖದಲ್ಲಿ ಬರೆದ ವಿಷಯವನ್ನನುಸರಿಸಿ ಆ ಲೇಖನವನ್ನು ಜಾಬು ಎಂದೊ ಅಥವಾ ಉತ್ತರ ಎಂದೊ ಹೇಳಬಹುದು. ಒಂದು ಊರಿನಲ್ಲಿ ಇಬ್ಬರು ಮನುಷ್ಯರಿಗೆ ಒಂದೇ ದಿನ ಒಬ್ಬೊಬ್ಬರಿಗೆ ಒಂದೊಂದು ಲೇಖ ಬರುವುದು ನಡೆದಿದೆ. ಆಗ ಅವರಲ್ಲಿ ಒಬ್ಬನು ನನಗೆ 'ಜಾಬು' ಬಂದಿದೆಯೆಂದು ಇತರರೊಂದಿಗೆ ಹೇಳಿದಾಗ, ಎರಡನೆಯವನು ನನಗೆ 'ಉತ್ತರ' ಬಂದಿದೆಯೆಂದು ಹೇಳಿದ್ದಾನಂತೆ. ಈ ವಿಧವಾಗಿ ಇಬ್ಬರು ಎರಡು ವಿಧಗಳ ಹೆಸರುಗಳನ್ನು ಬಂದಿರುವ ಲೇಖಕ್ಕೆ ಹೇಳುವುದಾಗಿದೆ. ಇಬ್ಬರಿಗೆ ಬಂದಿರುವುದು ಲೇಖನವೇ ಆದರೂ ಅದರಲ್ಲಿ ಒಂದು ಜಾಬು, ಮತ್ತೊಂದು ಉತ್ತರ ಹೇಗೆ ಆಗಿದೆಯೋ ವಿವರಿಸಿ ಹೇಳಿಕೊಳ್ಳೋಣ. ಲೇಖನದಲ್ಲಿ ಲಿಖಿಸಲ್ಪಡುವ ಸಮಾಚಾರ ಎರಡು ವಿಧಗಳಾಗಿ ಇರುತ್ತದೆ. ಲೇಖನದಲ್ಲಿ ಲಿಖಿಸಲ್ಪಟ್ಟ ಸಮಾಚಾರವನ್ನನುಸರಿಸಿ

ಜಾಬು ಅಥವಾ ಉತ್ತರ ಎಂದು ಹೇಳುವುದು ನಡೆಯುತ್ತಿದೆ. ಲೇಖನದಲ್ಲಿ ಬರೆಯಲ್ಪಟ್ಟ ಸಮಾಚಾರವನ್ನು ಓದಿದ ನಂತರ ಅದು ಜಾಬೋ ಅಥವಾ ಉತ್ತರವೊ ಎರಡರಲ್ಲಿ ಯಾವುದೊ ನಿರ್ಣಯಿಸಲ್ಪಡುತ್ತದೆ. ಪೂರ್ವದಲ್ಲಿ ಮನುಷ್ಯ ಕಣ್ಣಿನಿಂದ ಓದುವಂತಹ ಸಮಾಚಾರವಾದರೂ, ಅಥವಾ ಕಿವಿಯಿಂದ ಕೇಳುವ ಸಮಾಚಾರವಾದರೂ ಎರಡು ವಿಧಗಳು ಇರುತ್ತವೆಂದು ಜ್ಞಾನಿಗಳು ಹೇಳುತ್ತಿದ್ದರು. ಜ್ಞಾನೇಂದ್ರಿಯಗಳಾದ ಕಣ್ಣು, ಕಿವಿ ಎರಡು ದ್ವಾರಗಳ ಮುಖಾಂತರ ಮನುಷ್ಯನಿಗೆ ಸೇರುವ ಸಮಾಚಾರ ಒಂದು ಭುಕ್ತಿಗೆ (ಪ್ರಾಪಂಚಿಕವಾಗಿ) ಅಗತ್ಯವಾದುದು. ಎರಡು ಮುಕ್ತಿಗೆ ಅಗತ್ಯವಾದುದು. **ಭುಕ್ತಿ'ಗೆ** ಸಂಬಂಧಿಸಿದ ಸಮಾಚಾರ ಇರುವುದನ್ನು **'ಜಾಬು'** ಎಂದು ಕರೆಯುತ್ತಿದ್ದೇವೆ. ಹಾಗೆ **ಮುಕ್ತಿಗೆ** ಸಂಬಂಧಿಸಿದ ಸಮಾಚಾರ ಇರುವುದನ್ನು **'ಉತ್ತರ'** ಎಂದು ಹೇಳುತ್ತಿದ್ದರು.

'ಮುಕ್ತಿ'ಗೆ ಅಂದರೆ ದೈವವನ್ನು ತಿಳಿಯುವ ಸಮಾಚಾರವಾದ ದೈವಜ್ಞಾನ ಇರುವುದನ್ನು ಮುಕ್ತಿಗೆ ಸಂಬಂಧಿಸಿದ ವಿಷಯ ಎನ್ನುತ್ತಿದ್ದರು. ಒಬ್ಬ ಮನುಷ್ಯ ಮುಕ್ತಿಯನ್ನು ಸೇರಬೇಕೆಂದರೆ ಆತನ ಕರ್ಮ ಎಲ್ಲವೂ ಶೇಷವಿಲ್ಲದಂತೆ ಹೋಗಬೇಕು. ಶೇಷವಿಲ್ಲದೆ ಮುಗಿಯಬೇಕೆಂದರೆ ಕರ್ಮವನ್ನು ಅನುಭವಿಸಿ ಯಾದರೂ ಅನುಭವಿಸಬೇಕು ಅಥವಾ ಅನುಭವಿಸಲು ಕೆಲಸಕ್ಕೆ ಬಾರದಂತೆ ಜ್ಞಾನದಿಂದಲೇ ಸುಟ್ಟುಹಾಕಬೇಕು. ಮುಗಿಯುವವರೆಗು ಅನುಭವಿಸಬೇಕೆಂದರೆ ಕೆಲವು ನೂರಾರು ಜನ್ಮಗಳು ಹಿಡಿಸುವಷ್ಟು ಕರ್ಮ ಇರುತ್ತದೆ. ಹಾಗೆ ಅನುಭವಿಸುವುದರಲ್ಲಿ ಅಜ್ಞಾನದಿಂದ ಇನ್ನೂ ಸ್ವಲ್ಪ ಕರ್ಮ ಸೇರಬಹುದು. ಪ್ರಕೃತಿ ಧರ್ಮದ ಪ್ರಕಾರ ಇರುವ ಜ್ಞಾನ ಇಲ್ಲದಂತೆ ಹೋಗಬಹುದು. ಆದ್ದರಿಂದ ಅನುಭವಿಸಿ ಕರ್ಮವನ್ನು ಶೇಷವಿಲ್ಲದಂತೆ ಮುಗಿಸಿಕೊಳ್ಳಬೇಕೆಂದುಕೊಳ್ಳುವುದು ಸಾಧ್ಯವಾಗುವ ಕೆಲಸವಲ್ಲ. ಮನುಷ್ಯ ಯಾವ ಮತದಲ್ಲಿದ್ದರೂ ಅವನು ಮುಕ್ತಿಯನ್ನು ಸೇರುವುದಕ್ಕೆ, ದೇವರ ಜ್ಞಾನದಿಂದಲೇ ಕರ್ಮವನ್ನು ಇಲ್ಲದಂತೆ ಮಾಡಿಕೊಳ್ಳುವುದಕ್ಕೆ ಅವಕಾಶವಿರುವಂತೆ ಮಾಡಿದ್ದಾನೆ. ಹಿಂದೂಮತದಲ್ಲಿ ಇರುವವನಿಗೆ **"ಕರ್ಮವನ್ನು ಜ್ಞಾನಾಗ್ನಿಯಿಂದ ದಹಿಸಿಕೊಳ್ಳಬಹುದು"** ಎಂದು ದೈವಗ್ರಂಥವಾದ ಭಗವದ್ಗೀತೆಯಲ್ಲಿ ಹೇಳುವುದಾಗಿದೆ. **"ದೇವರು ಪಾಪವನ್ನು**

**ಕ್ಷಮಿಸುತ್ತಾನೆ"** ಎಂದು ದ್ವಿತೀಯ ದೈವಗ್ರಂಥವಾದ ಬೈಬಲ್‌ನಲ್ಲಿ ಹೇಳುವುದಾಗಿದೆ. ಹಾಗೆ **"ದೇವರು ಕ್ಷಮಾಶೀಲನು"** ಎಂದು ಅಂತಿಮ ದೈವಗ್ರಂಥವಾದ ಖುರಾನ್ ನಲ್ಲಿಯೂ ಹೇಳುವುದಾಗಿದೆ. ಮೂರು ದೈವ ಗ್ರಂಥಗಳಲ್ಲಿ ಹೇಳಿದ ಮಾತುಗಳು ದೈವ ವಚನಗಳಾದ್ದರಿಂದ ಅವು ತಪ್ಪದೆ ನೆರವೇರುತ್ತವೆ.

ದೇವರ ಜ್ಞಾನ ಉನ್ನತವಾದುದು. ಜ್ಞಾನವು ಅಗ್ನಿಯಂತೆ ಕೆಲಸಮಾಡಿ ಕರ್ಮವನ್ನು ಸುಡುತ್ತಿದೆ. ದೇವರಾಗಲಿ, ದೇವರ ಜ್ಞಾನವಾಗಲಿ ಶರೀರದಲ್ಲಿ ಉನ್ನತವಾದ ಸ್ಥಾನದಲ್ಲಿ ಅಂದರೆ ಶರೀರದ ಮೇಲ್ಭಾಗದಲ್ಲಿ ಶಿರಸ್ಸಿನಲ್ಲಿ ಇದೆಯೆಂದು ಹಿರಿಯರು ಹೇಳುತ್ತಿದ್ದರು. ಜ್ಞಾನ ಮೂಲವೆಲ್ಲವೂ ಮೇಲೆ ತಲೆಯಲ್ಲಿ ಇದೆಯೆಂದು ಹೇಳುತ್ತಾ ಭಗವದ್ಗೀತೆಯಲ್ಲಿ ಪುರುಷೋತ್ತಮಪ್ರಾಪ್ತಿ ಯೋಗದಲ್ಲಿ ಮೊದಲ ಶ್ಲೋಕದಲ್ಲಿಯೇ **"ಊರ್ಧ್ವಮೂಲ"** ಎಂದು ಹೇಳಿದ್ದಾರೆ. ಗಿಡಕ್ಕೆ ಮೂಲ ಕೆಳಗಿರುವಂತೆ, ಮನುಷ್ಯನಿಗೆ ಮೂಲ ಮೇಲೆ ಇದೆಯೆಂದು ಅಲ್ಲಿ ಹೇಳಿದ್ದಾರೆ. **'ಊರ್ಧ್ವ'** ಎನ್ನುವ ಶಬ್ಧದಿಂದ **'ಉತ್ತರ'** ಎನ್ನುವ ಶಬ್ಧವು ಹುಟ್ಟಿದೆ. ಊರ್ಧ್ವ ಎಂದರೆ ಮೇಲೆಯೆಂದು ಹೇಳಿದಂತೆ, ಉತ್ತರ ಎಂದರೆ ಮೇಲೆ ಎಂದು ಹೇಳಿದಂತೆ, ಉತ್ತರ ದಿಶೆ ಭೂಮಿಗೆ ಮೇಲೆ ಇದೆ. ಶರೀರದಲ್ಲಿನ ಪ್ರತಿ ಸಮಾಚಾರ ಶರೀರದ ಮೇಲಿರುವ ತಲೆಗೆ ಸೇರುವಂತೆ, ಭೂಮಿಗೆ ದಕ್ಷಿಣ ದಿಶೆಯಲ್ಲಿಂದ ಉತ್ತರ ದಿಶೆಗೆ ಗುರುತ್ವಾಕರ್ಷಣ ಶಕ್ತಿ ಹರಡುತ್ತಿದೆ. ಭಾರತದೇಶದ ಕೆಳಗಿಭಾಗ ದಕ್ಷಿಣವಾಗಿದ್ದು, ಮೇಲಿನ ಭಾಗ ಉತ್ತರ ದಿಶೆಯಲ್ಲಿ ಇದೆ. **ಉತ್ತರ ದಿಶೆ** ಎಂದರೆ **'ಜ್ಞಾನದಿಶೆ'** ಎಂದು ಅರ್ಥವಿದೆ. ಏಕೆಂದರೆ! ಮನುಷ್ಯ ಶಿರಸ್ಸಿನಲ್ಲಿರುವ ಜ್ಞಾನವು ಮೇಲ್ಭಾಗದಲ್ಲಿ ಇರುವುದರಿಂದ, ದೇಶಕ್ಕೆ ಉತ್ತರದ ಮೇಲ್ಭಾಗದಲ್ಲಿ ಇರುವುದರಿಂದ, ವಿಶ್ವದಲ್ಲಿ ಗುರುತ್ವಾಕರ್ಷಣ ಶಕ್ತಿ ದಕ್ಷಿಣದಿಂದ ಉತ್ತರಕ್ಕೆ ಹೋಗುತ್ತಿರುವುದರಿಂದ, ಉತ್ತರ ದಿಶೆ ಜ್ಞಾನ ಸಂಬಂಧವಾದುದೆಂದು ಹೇಳಬಹುದು. ಪೂರ್ವದಲ್ಲಿ ಮನುಷ್ಯ ಮರಣಿಸಿದರೆ ಊರಿಗೆ ಉತ್ತರದಲ್ಲಿ ಸ್ಮಶಾನ ಏರ್ಪಡಿಸಿ ಉತ್ತರ ದಿಶೆಯಲ್ಲಿರುವ ಸ್ಮಶಾನದಲ್ಲಿ ಹೂತಿಡುತ್ತಿದ್ದರು. ಈ ವಿಧವಾಗಿ ಉತ್ತರ ದಿಶೆ ಜ್ಞಾನಮಾರ್ಗದಲ್ಲಿ ಒಂದು ಪ್ರತ್ಯೇಕತೆಯನ್ನು ಸಂಪಾದಿಸಿಕೊಂಡಿದೆ.

ಉತ್ತರ ದಿಶೆ ಜ್ಞಾನದಲ್ಲಿ ಪ್ರತ್ಯೇಕತೆ ಹೊಂದಿರುವುದರಿಂದ, ದೈವ ಸಂಬಂಧವಾದ ಜ್ಞಾನವನ್ನಾಗಲಿ, ಜ್ಞಾನವಿರುವ ಯಾವ ಸಮಾಚಾರವನ್ನಾಗಲಿ **"ಉತ್ತರ"** ಎನ್ನುವ ಹೆಸರಿಟ್ಟು ಕರೆಯುತ್ತಿದ್ದರು. ಈಗ ಅಸಲು ವಿಷಯಕ್ಕೆ ಬಂದರೆ ಲೇಖನದಲ್ಲಿ ದೈವಜ್ಞಾನಕ್ಕೆ ಸಂಬಂಧಿಸಿದ ಸಮಾಚಾರ ಇದ್ದರೆ ಅದನ್ನು ಉತ್ತರ ಎನ್ನುತ್ತಿದ್ದರು. ಲೇಖನವನ್ನು ಯಾರು ಬರೆದರೂ, ಯಾರಿಗೆ ಬರೆದರೂ, ಅದರಲ್ಲಿ ಸಮಾಚಾರ ಜ್ಞಾನವಂತವಾದುದಾದರೆ ಆ ಲೇಖನವನ್ನು 'ಉತ್ತರ' ಎಂದು ಹೇಳುತ್ತಿದ್ದರು ಆದುದರಿಂದ ಇಬ್ಬರಲ್ಲಿ ಒಬ್ಬನಿಗೆ ಬಂದಿರುವ ಲೇಖನದಲ್ಲಿ ದೈವ ಸಂಬಂಧ ಜ್ಞಾನ ವಿಷಯಗಳಿರುವುದರಿಂದ ಅವನು ನನಗೆ ಉತ್ತರ ಬಂದಿದೆಯೆಂದು ಆ ಲೇಖನವನ್ನು ಕುರಿತು ಹೇಳಿದ್ದಾನೆ. ಈ ವಿಧವಾಗಿ ಲೇಖನಗೆ 'ಉತ್ತರ' ಎನ್ನುವ ಹೆಸರು ಬಂದಿದೆ.

ಬರೆಯುವ ಲೇಖನದಲ್ಲಿರುವ ಸಮಾಚಾರ ದೈವಜ್ಞಾನಕ್ಕೆ ಸಂಬಂಧಿಸಿರುವುದೆ ಇರದೆ ಪ್ರಪಂಚ ಸಂಬಂಧ ಸಮಾಚಾರಕ್ಕೆ ಸಂಬಂಧಿಸಿ ಕೂಡ ಇರಬಹುದು. ಪ್ರಪಂಚದಲ್ಲಿ ಬರೆಯುವ ಲೇಖನಗಳೆಲ್ಲ ಪ್ರಪಂಚ ಸಂಬಂಧ ಸಮಾಚಾರ ಇರುವವೇ ಆಗಿರುತ್ತವೆ. ಪ್ರಪಂಚ ಸಂಬಂಧ ಸಮಾಚಾರ ಇರುವ ಲೇಖವನ್ನು **'ಜಾಬು'** (ಪತ್ರ) ಎಂದು ಹೇಳುತ್ತಿದ್ದಾರೆ. ಜಾಬಿಗು ಕೂಡಾ ಅರ್ಥವಿದೆ. **'ಜಾ' ಎಂದರೆ 'ಹುಟ್ಟುವುದೆಂದು'** ಭಾವನೆ ಇದೆ. **'ಬು'** ಎಂದರೆ **'ಸಾಯುವುದು'** ಎಂದು ಅರ್ಥ ಇದೆ. ಹುಟ್ಟುವುದರಲ್ಲಿ ಮನುಷ್ಯ ಶರೀರ ಹುಟ್ಟಿ ಕಾಣಿಸುತ್ತಿದೆ. ಮರಣದಿಂದ ಮನುಷ್ಯನ ಶರೀರ ಕಾಣಿಸದೆಹೋಗುತ್ತದೆ. ಮನುಷ್ಯ ತಾಯಿ ಗರ್ಭದಿಂದ ಹುಟ್ಟುತ್ತಿದ್ದಾನೆ. ನಂತರ ಸ್ವಲ್ಪಕಾಲ ಜೀವಿಸಿ ಮರಣಿಸುವುದು ನಡೆಯುತ್ತಿದೆ. ಮರಣದಲ್ಲಿ ಶರೀರವನ್ನು ಭೂಮಿಯಲ್ಲಿ ಹೂತಿಡುವುದೊ ಅಥವಾ ಅಗ್ನಿಯಲ್ಲಿ ಬೂದಿಪಾಲುಮಾಡುವುದೊ ನಡೆಯುತ್ತಿದೆ. **'ಹೂತಿಡುವುದು'** ಎನ್ನುವ ಮಾತನ್ನು **'ಹೂಳಿಡುವುದು'** ಎಂದು ಕೂಡ ಕೆಲವರು ಕರೆಯುತ್ತಿದ್ದರು. ಶರೀರವನ್ನು ಹೂತಿಡುವುದಾಗಲಿ, ಬೂದಿಪಾಲು ಮಾಡುವುದಾಗಲಿ ಮರಣದಲ್ಲಿಯೇ ನಡೆಯುತ್ತದೆ. ಒಬ್ಬ ಮನುಷ್ಯ ಹುಟ್ಟುವುದು, ಸಾಯುವುದು ಸಾಧಾರಣವಾಗಿ ನಡೆಯುವ ಪ್ರಪಂಚ ಸಂಬಂಧವಾದ ವಿಷಯವೆ. ಅಜ್ಞಾನ

ದಲ್ಲಿರುವ ಮನುಷ್ಯ ಹುಟ್ಟುವುದು. ಸಾಯುವುದು ನಡೆಯುತ್ತಿರುತ್ತದೆ. ಜ್ಞಾನದಲ್ಲಿರುವ ಮನುಷ್ಯ ಹುಟ್ಟು, ಸಾವಿನಿಂದ ಹೊರಬಿದ್ದು ಮೋಕ್ಷವನ್ನು ಹೊಂದುತ್ತಾನೆ. ಅಜ್ಞಾನದಲ್ಲಿನ ಮನುಷ್ಯನಿಗೆ ಸಾವುಹುಟ್ಟುಗಳು ಹೊಂದುತ್ತಿರುತ್ತಾನೆ. ಆದುದರಿಂದ ಹುಟ್ಟುವುದಕ್ಕೆ ಗುರುತಾಗಿ 'ಜಾ' ಎಂದೂ, ಮರಣಕ್ಕೆ ಗುರುತಾಗಿ 'ಬು' ಎಂದೂ ಎರಡು ಅಕ್ಷರಗಳನ್ನು ಸೇರಿಸಿ ಪ್ರಪಂಚ ಸಂಬಂಧ ಅಜ್ಞಾನ ಸಮಾಚಾರ ಇರುವ ಲೇಖವನ್ನು 'ಜಾಬು' ಎಂದು ಕರೆಯುತ್ತಿದ್ದರು. ಲೇಖನದಲ್ಲಿ ದೈವ ಸಂಬಂಧ ಸಮಾಚಾರವಿದ್ದರೆ ಅದನ್ನು **'ಉತ್ತರ'** ಎಂದೂ, ಪ್ರಪಂಚ ಸಂಬಂಧ ಸಮಾಚಾರವಿದ್ದರೆ ಅದನ್ನು **'ಜಾಬು'** ಎಂದೂ ಹೇಳುತ್ತಿದ್ದರು.

**ಲೇಖ** ——
- **ಜಾಬು – ಪ್ರಪಂಚ ಸಂಬಂಧವಾದುದು.**
- **ಉತ್ತರ – ಪರಮಾತ್ಮ ಸಂಬಂಧವಾದುದು.**

**ಪ್ರಶ್ನೆ :– ಪ್ರಪಂಚ ಸಂಬಂಧವಾದ ಸಮಾಚಾರ ಇರುವ ಗ್ರಂಥವನ್ನು ಜಾಬು ಎನ್ನಬಹುದು ಅಲ್ಲವೆ! ಹಾಗೆ ದೈವಸಂಬಂಧವಾದ ಸಮಾಚಾರವಿರುವ ಗ್ರಂಥವನ್ನು ಉತ್ತರ ಎಂದು ಹೇಳಬಹುದು ಅಲ್ಲವೆ!**

**ಉತ್ತರ :–** ಸಮಾಚಾರವನ್ನನುಸರಿಸಿ ಜಾಬು, ಉತ್ತರ ಎನ್ನಬಹುದು. ಬರೆಯುವ ಸಮಾಚಾರವನ್ನು ಲೇಖನೆ ಎನ್ನುತ್ತಿದ್ದೇವೆ. ಲಿಖಿಸಲ್ಪಡುವುದು ಆದ್ದರಿಂದ ಲೇಖವು ಎನ್ನುವ ಹೆಸರಿನಿಂದ ಹೇಳುತ್ತಿದ್ದೇವೆ. ಆದರೆ ಬರೆಯಲ್ಪಟ್ಟ ಲೇಖನೆ ದೊಡ್ಡದು ಆಗಬಹುದು, ಚಿಕ್ಕದು ಆಗಬಹುದು. ಲೇಖನೆ ಒಂದು ಕಾಗದದಲ್ಲಿಯೇ ಬರೆಯಲ್ಪಟ್ಟಿರಬಹುದು. ಅಥವಾ ಕೆಲವು ಕಾಗದ (ಹಾಳೆ) ಗಳು ಸೇರಿಸಿದ ಗ್ರಂಥವಾಗಿ ಕೂಡಾ ಬರೆಯಬಹುದು. ಆದುದರಿಂದ ಲೇಖ ಎನ್ನುವುದು ಅಂದರೆ ಜಾಬಾಗಲಿ, ಉತ್ತರವಾಗಲಿ ಒಂದು ಕಾಗದವಾಗಬಹುದು ಅಥವಾ ಒಂದು ಗ್ರಂಥ ಆಗಬಹುದು.

ಸಮಾಚಾರ ಚಿಕ್ಕದಾದರೆ ಚಿಕ್ಕ ಹಾಳೆಯಲ್ಲಿ ಬರೆಯಬಹುದು. ಸಮಾಚಾರ ದೊಡ್ಡದಾದರೆ ಒಂದು ಗ್ರಂಥರೂಪದಲ್ಲಿ ಬರೆಯಬಹುದು.

ಪ್ರಪಂಚದಲ್ಲಿ ಎಲ್ಲರೂ ಬರೆಯುವವು ಜಾಬುಗಳೇ ಇರುತ್ತವಾಗಲಿ, ಸ್ವಲ್ಪಜನ ಬರೆಯುವವು ಮಾತ್ರ ಉತ್ತರಗಳಾಗಿ ಇರುತ್ತವೆ. ತ್ರೈತ ಸಿದ್ಧಾಂತ ಜ್ಞಾನ ತಿಳಿದವರು ಯಾರಾದರೂ ಜಾಬುಗಳು ಬರೆಯುವುದಿಲ್ಲ. ಉತ್ತರಗಳೇ ಬರೆಯುತ್ತಾರೆ.

**ಪ್ರಶ್ನೆ :– ನೀವು ಬರೆದವುಗಳಲ್ಲಿ ಹೆಚ್ಚಾಗಿ ಯಾವು ಇವೆ. ಜಾಬುಗಳ ಉತ್ತರಗಳಾ?**

**ಉತ್ತರ :–** ನಾವು ಬರೆದ 81 ಗ್ರಂಥಗಳೆಲ್ಲವೂ ಉತ್ತರಗಳೇ ಹೊರತು ಜಾಬುಗಳು ಒಂದು ಕೂಡಾ ಇಲ್ಲ. ನಮ್ಮ ಉತ್ತರಗಳೆಲ್ಲವೂ ಚಿಕ್ಕದಾಗಿ ಯಾವುವು ಇಲ್ಲ. ಎಲ್ಲಾ ಕೆಲವು ಹಾಳೆಗಳ ಸಮುದಾಯವು ಗ್ರಂಥಗಳಾಗಿ ಇವೆ.

**ಪ್ರಶ್ನೆ :– ನೀವು ಲಿಪಿಯನ್ನು ಉಪಯೋಗಿಸಿ ಗ್ರಂಥಗಳು ಬರೆದಿದ್ದೀರಾ ಅಲ್ಲವೆ! ಲಿಪಿಯನ್ನು ಉಪಯೋಗಿಸಿ ಬರೆಯಲ್ಪಟ್ಟಿರುವುದು ಲೇಖವಾದಾಗ ಲೇಖನವನ್ನು ಬರೆದವರು ಲೇಖಕ ಆಗುತ್ತಾರೆ ಅಲ್ಲವೆ! ಹಾಗಿರುವಾಗ ನಿಮ್ಮನ್ನು ಗ್ರಂಥಕರ್ತ ಎಂದು ಕರೆಯದೆ 'ಲೇಖಕ' ಎಂದು ಕರೆಯಬಹುದು ಅಲ್ಲವೆ!**

**ಉತ್ತರ :–** 'ಲೇಖಕ' ಎಂದು ಕರೆಯುವುದರಲ್ಲಿ ತಪ್ಪಿಲ್ಲ. ಆದರೆ ಬರೆಯಲ್ಪಟ್ಟ ವಿಷಯ ಎಲ್ಲರಂತಲ್ಲದೆ ಪ್ರತ್ಯೇಕತೆಯನ್ನು ಸಂತರಿಸಿಕೊಂಡಿದ್ದರೆ ಅಂತಹ ಲೇಖವನ್ನು ಬರೆದವನನ್ನು ಸಾಧಾರಣ ಲೇಖಕ ಎನ್ನದಂತೆ 'ವಿಲೇಖಕ' ಎಂದು ಕರೆಯಬೇಕು. ವಿಲೇಖಕ (ವಿಲೇಖರಿ) ವಿಶೇಷವಾಗಿ ಅನ್ವೇಷಣೆ ಅಥವಾ ಸಂಶೋಧನೆ ಮಾಡಿದ ವಿಷಯಗಳನ್ನು ಎಂದರೆ ವಿಶೇಷವಾದ ಸಮಾಚಾರವನ್ನು ಬರೆದವನೆಂದು ಅರ್ಥ. ನಾವು ಬರೆದ ಪ್ರತಿ ಗ್ರಂಥವೂ ಒಂದು ವಿಶೇಷತೆ ಹೊಂದಿರುತ್ತದಾದ್ದರಿಂದ ನಮ್ಮ ಗ್ರಂಥಗಳನ್ನು ವಿಲೇಖರಿ ಗ್ರಂಥಗಳೆನ್ನಬಹುದು.

**ಪ್ರಶ್ನೆ :– ಸಾಧಾರಣ ವಾರ್ತೆಗಳನ್ನು ವಾರ್ತಾಪತ್ರಿಕೆಗಳಿಗೆ ಬರೆದುಕೊಡುವವರನ್ನು ವಿಲೇಖಕರೆಂದು ಕರೆಯುವುದನ್ನು ಕೇಳಿದ್ದೇವೆ. ಈಗ ನೀವು ಹೇಳುವ ಭಾವನೆ ಪ್ರಕಾರವಾದರೆ ವಾರ್ತಾಪ್ರತಿಕೆಗಳಿಗೆ ವಾರ್ತೆಗಳು ಬರೆಯುವವರು ವಿಲೇಖಕರೇ ಅಲ್ಲವೆಂದು ಹೇಳಬೇಕು. ಆದರೆ ವಾರ್ತಾ ಪತ್ರಿಕೆಗಳಿಗೆ ವಾರ್ತೆಗಳನ್ನು ಬರೆಯುವವರನ್ನು ಏನನ್ನಬೇಕು?**

**ಉತ್ತರ :–** ಅವರು ಪತ್ರಿಕೆಗಳಿಗೆ ಸಮಾಚಾರವನ್ನು ಬರೆಯುವವರಾದ್ದರಿಂದ ಅವರನ್ನು 'ಲೇಖಕರು' ಎಂದು ಹೇಳಬಹುದು. ಯಾವಾಗಾದರೂ ಅವರು ವಿಶೇಷವಾದ ಸಮಾಚಾರವನ್ನು ಬರೆದು ಕೊಟ್ಟರೆ, ಆಗ ಅವರು ಅಲ್ಲಿಗೆ ಅಂದರೆ ಆ ಸಮಾಚಾರಕ್ಕೆ ಮಾತ್ರ ವಿಲೇಖಕರಾಗುತ್ತಾರೆ. ಅಷ್ಟೇಹೊರತು ಅವರು ಶಾಶ್ವತವಾಗಿ ವಿಲೇಖಕರಲ್ಲ. ಬರೆಯುವ ಸಮಾಚಾರವನ್ನನುಸರಿಸಿ ಅವರು ಲೇಖಕರಾ? ವಿಲೇಖಕರಾ ಎನ್ನುವ ಹೆಸರು ಬರುತ್ತದೆ. ಆದುದರಿಂದ ಯಾರೂ ಪ್ರತಿ ಸಮಾಚಾರದಲ್ಲಿಯೂ ವಿಲೇಖಕನು ಆಗಲಾರನು. ಹಾಗೆ ಪ್ರತಿ ವಿಷಯದಲ್ಲಿಯೂ ಲೇಖಕನು ಕೂಡಾ ಆಗಲಾರನು.

**ಪ್ರಶ್ನೆ:– ನೀವು ನಿಮ್ಮ ಗ್ರಂಥಗಳ ಮೇಲೆ ರಚಯಿತನ ಹೆಸರಿನ ಕೆಳಗೆ "ಸಂಚಲನಾತ್ಮಕ ರಚಯಿತ" ಎಂದು ಹೆಸರು ಇಟ್ಟಿಕೊಂಡಿದ್ದೀರಾ. ಪ್ರತಿ ವಿಷಯ, ಪ್ರತಿ ಗ್ರಂಥ ಸಂಚಲನಾತ್ಮಕವಾದುದೇ ಆದರೆ ನಿಮ್ಮನ್ನು ವಿಲೇಖಕ ಎಂದೇ ಹೇಳಬಹುದು ಅಲ್ಲವೆ! ನಿಮ್ಮ ಪ್ರತಿಯೊಂದು ಗ್ರಂಥ ವಿಶೇಷದಿಂದ ಕೂಡಿಕೊಂಡಿರುವುದಾದಾಗ, ನಿಮ್ಮನ್ನು ಶಾಶ್ವತವಾಗಿ "ವಿಲೇಖಕ" ಎಂದು ಕರೆಯಬಹುದು ಅಲ್ಲವೆ!**

**ಉತ್ತರ :–** ಯಾರಷ್ಟಕ್ಕವರು 'ವಿಲೇಖಕ' ಎಂದು ಇಟ್ಟುಕೊಳ್ಳುವುದರಲ್ಲಿ ಪ್ರತ್ಯೇಕತೆ ಏನು ಇಲ್ಲ. ಅದು ಬರೆದ ವಿಷಯವನ್ನು ಓದಿದವರು ವಿಶೇಷತೆಯನ್ನು ಕುರಿತು ಇತರರು ಇಡುವ ಬಿರುದಿನಂತದ್ದೆ ಹೊರತು, ಯಾರಷ್ಟಕ್ಕವರು ಇಟ್ಟುಕೊಳ್ಳುವುದು ದೊಡ್ಡತನವಲ್ಲ. ನಾವು ಬರೆದ ಗ್ರಂಥದಲ್ಲಿನ ಪ್ರತ್ಯೇಕತೆಯನ್ನು ವಿಶೇಷತೆಯನ್ನು ಗುರುತಿಸಿದವರು ನಮ್ಮನ್ನು ಲೇಖಕರೆಂದೊ, ವಿಲೇಖಕರೆಂದೊ ನಿರ್ಧಾರಿಸಿ ಹೇಳಬಹುದು. ವಿಲೇಖಕ ಎನ್ನುವುದು ಇತರರಿಂದ ಹೇಳಲ್ಪಡುವುದೆ ಹೊರತು, ತನಗೆ ತಾನು ಹೇಳಿಕೊಳ್ಳುವುದು ಅಲ್ಲ.

**ಪ್ರಶ್ನೆ :– ದ್ವಾಪರಯುಗದಲ್ಲಿ ಕೃಷ್ಣನು ಭಗವದ್ಗೀತೆಯನ್ನು ಹೇಳಿದ್ದಾನೆ. ಅದನ್ನು ವ್ಯಾಸನು ಬರೆದಿದ್ದಾನೆ. ಭಗವದ್ಗೀತೆ ವಿಶೇಷವಾದ ಜ್ಞಾನ ಇರುವುದು. ಆದ್ದರಿಂದ ಭಗವದ್ಗೀತೆಯನ್ನು ಹೇಳಿದ ಕೃಷ್ಣನನ್ನು, ಬರೆದ ವ್ಯಾಸನನ್ನು ಇಬ್ಬರನ್ನು ಸೇರಿಸಿ ನೋಡಿದರೆ ಯಾರು ಭಗವದ್ಗೀತೆಗೆ ಗ್ರಂಥಕರ್ತ, ಯಾರು 'ವಿಲೇಖಕ' ಎಂಬ ಹೆಸರಿಗೆ ಅರ್ಹತೆ ಇರುವವರು?**

**ಉತ್ತರ :–** ಮನೆಗೆ ಪ್ಲಾನ್‌ಹಾಕಿದ ಎಂಜನೀರ್‌ಯೇ ಮುಖ್ಯ ಹೊರತು, ಮನೆ ಕಟ್ಟಿದವನು ಮುಖ್ಯವಲ್ಲ. ಎಂಜನೀರ್ ಬರೆದ ನಮೂನೆಯ ಪ್ರಕಾರವೇ ಮನೆ ಕಟ್ಟಲಾಗುತ್ತದೆ. ಆದ್ದರಿಂದ ಮನೆ ಕಟ್ಟಿದವನ ಪ್ರತ್ಯೇಕತೆ ಅದರಲ್ಲಿ ಏನು ಇರುವುದಿಲ್ಲ. ಹಾಗೆ ಭಗವದ್ಗೀತೆಯಲ್ಲಿನ ಜ್ಞಾನವನ್ನು ಜೋಡಿಸಿ ಹೇಳಿದ ಕೃಷ್ಣನೆ ಮುಖ್ಯ ಹೊರತು, ಹೇಳಿರುವುದನ್ನು ಬರೆದವನು ಮುಖ್ಯವಲ್ಲ. ಹೇಳಿದವನಿಗಿಂತ ಬರೆದವನು ಮುಖ್ಯ ಎಂದರೆ, ಬರೆದವನಿಗಿಂತ ಪೇಪರ್ ಮೇಲೆ ಬರೆದ ಲೇಖನಿ ಮುಖ್ಯವಾಗುತ್ತದೆ. ಯಾವ ವಿಧವಾಗಿ ನೋಡಿದರೂ ಭಗವದ್ಗೀತೆ ವೊಂದರ ವಿಲೇಖಕ ಕೃಷ್ಣನೆ ಆಗುತ್ತಾನೆ. ಲೇಖಕ ಎಂದರೆ ಬರೆದವನು! ಹಾಗಿರುವಾಗ ಕೃಷ್ಣನು ಬರೆಯಲಿಲ್ಲ ಅಲ್ಲವೆ! ಎನ್ನುವ ಪ್ರಶ್ನೆ ಕೆಲವರಿಗೆ ಬರಬಹುದು. ಯಾವಾಗ ಹೇಳಲಾಗಿದೆಯೋ ಆಗಲೇ ಬರೆಯದಿದ್ದರೂ ಬರೆದಿರುವುದಕ್ಕೆ ಸಮಾನವಾಗುತ್ತಿದೆ. ಆದುದರಿಂದ ನಂತರ ಬರೆದವನಿಗಿಂತ ಮೊದಲು ಹೇಳಿದವನೆ ಮುಖ್ಯ, ಆತನೆ ವಿಲೇಖಕ.

**ಪ್ರಶ್ನೆ :– ಭಗವದ್ಗೀತೆ ಗ್ರಂಥರೂಪದಲ್ಲಿ ಬರೆಯಲಾಗಿದೆ. ಮೊದಲು ಸಂಸ್ಕೃತದಲ್ಲಿ ಬರೆಯಲಾಗಿದೆ. ಅದನ್ನು ಕೃಷ್ಣನು ಹೇಳಿದಾಗ ಅದು ವಿಲೇಖಕವಾಗಿ, ವಿಶೇಷತೆ ಹೊಂದಿದ ಉತ್ತರವಾಗಿರಬಹುದು. ನಂತರ ಎಷ್ಟೋಜನ ಪಂಡಿತರೆನ್ನುವವರು ಉಳಿದ ಭಾಷೆಗಳಲ್ಲಿ ಲಿಖಿಸಿದ್ದಾರೆ. ಕನ್ನಡದೊಳಗೆ ಬರೆದ ಭಗವದ್ಗೀತೆಯಲ್ಲಿ ಕೃಷ್ಣನ ಭಾವನೆ ಸ್ವಲ್ಪವೂ ಇಲ್ಲದೇ ಹೋಗಿದೆ. ಕೇವಲ ಆಗ ಕನ್ನಡದಲ್ಲಿ ಓದಿದವರಿಗೆ ಅದರಲ್ಲಿನ ವಿಶೇಷತೆ ಏನು ಇಲ್ಲದಂತೆ ತಿಳಿಯುತ್ತಿದೆ. ಆ ವಿಧವಾಗಿ ಭಗವದ್ಗೀತೆ ಕೃಷ್ಣನ ಭಾವನೆಗೆ ದೂರವಾಗಿ ಬರೆಯಲಾಗಿದೆ ಆಗ ಅದನ್ನು ಏನನ್ನಬೇಕು? ವಿಶೇಷತೆ ಇಲ್ಲದಿರುವುದರಿಂದ ಕೇವಲ 'ಲೇಖ' ಎಂದು ಹೇಳಬೇಕಾ? ಅಥವಾ 'ವಿಲೇಖ' ಎಂದು ಹೇಳಬೇಕಾ?**

**ಉತ್ತರ :–** ಭಗವದ್ಗೀತೆ ಯಾವ ಭಾಷೆಯಲ್ಲಿ ಬರೆದರೂ ಭಗವದ್ಗೀತೆ ಶ್ಲೋಕಗಳು ಮಾತ್ರ ಸಂಸ್ಕೃತ ಭಾಷೆಯಲ್ಲಿಯೇ ಇರುತ್ತವೆ. ಸಂಸ್ಕೃತಶ್ಲೋಕ ಬರೆದ ನಂತರ

ಅದಕ್ಕೆ ಕನ್ನಡದಲ್ಲಿ ಭಾವಾರ್ಥ ಬರೆದಿರುತ್ತಾರೆ. ಸಂಸ್ಕೃತ ಶ್ಲೋಕಗಳು ಇರುವುದರಿಂದ ಅದರಲ್ಲಿ ಕೃಷ್ಣನ ಭಾವವಿದ್ದಂತೆಯಾಗುತ್ತದೆ. ನಂತರ ಬರೆದ ಕನ್ನಡ ಭಾವನೆಗಳು ಸರಿಯಾಗಿ ಇಲ್ಲದಿದ್ದರೆ ಅದರಲ್ಲಿ ವಿಶೇಷತೆ ಇಲ್ಲದಂತೆ ಹೋಗುತ್ತದೆ. ಅದು ಕನ್ನಡದಲ್ಲಿ ಬರೆದ ಗ್ರಂಥಕರ್ತರಿಗೆ ಸಂಬಂಧಿಸಿರುವುದಾಗುತ್ತದೆ. ಆಗ ಕನ್ನಡ ಭಗವದ್ಗೀತೆಯನ್ನು ಮಾತ್ರವೆ ವಿಶೇಷತೆ ಇಲ್ಲದ್ದಾಗಿ ಹೇಳಬಹುದು. ಅದನ್ನು ಲೇಖ ಎಂದೇ ಹೇಳಬೇಕು. ಕನ್ನಡದಲ್ಲಿ ಬರೆದ ಭಗವದ್ಗೀತೆಯಲ್ಲಿ ಸಂಸ್ಕೃತ ಶ್ಲೋಕಗಳಿರುವುದರಿಂದ ಅದರಲ್ಲಿಯೂ ಕೃಷ್ಣನ ನಿಜ ಭಾವನೆ ಇರುವುದರಿಂದ ಅದನ್ನೇ ವಿಶೇಷತೆ ಇರುವುದಾಗಿ ಲೆಕ್ಕಿಸಬಹುದು. ಕನ್ನಡದಲ್ಲಿ ಬರೆಯಲಾರದ್ದನ್ನೆ ವಿಶೇಷತೆ ಇಲ್ಲದಿರುವುದಾಗಿ ಹೇಳಬಹುದು. ಹೀಗೆ ಒಂದು ಕನ್ನಡ ಅನುವಾದ ಭಗವದ್ಗೀತೆಯಲ್ಲಿ ಎರಡು ಭಾವನೆಗಳಿರುವ ಭಗವದ್ಗೀತೆ ಸಂಸ್ಕೃತದಲ್ಲಿ, ಕನ್ನಡದಲ್ಲಿ ಇರುವುದರಿಂದ ಅದನ್ನು ಎರಡು ವಿಧಗಳಾಗಿ ವಿಶೇಷತೆ ಇರುವ ವಿಲೇಖವಾಗಿಯೂ, ವಿಶೇಷತೆ ಇಲ್ಲದ ಲೇಖವಾಗಿಯೂ ಹೇಳಬಹುದು.

**ಪ್ರಶ್ನೆ :– ಹೆಂಡತಿ (ಪತ್ನಿ) ದೂರದಪ್ರಾಂತದಲ್ಲಿರುವ ತನ್ನ ಪತಿ (ಗಂಡನಿ)ಗೆ ಪ್ರೀತಿಯಿಂದ ಲೇಖ ಬರೆದಿದ್ದಾಳೆ. ಅದರಲ್ಲಿ ತಮ್ಮ ಸಂಸಾರಕ್ಕೆ ಸಂಬಂಧಿಸಿದ ಸಮಾಚಾರವನ್ನು, ತಮ್ಮ ಮಕ್ಕಳ ಓದಿನ ವಿಷಯವನ್ನು, ಅದಕ್ಕೆ ಜೊತೆಯಾಗಿ ಕೆಲವು ಆರ್ಥಿಕ ತೊಂದರೆಗಳನ್ನು ಬರೆಯಲಾಗಿದೆ. ಐದಾರು ವಿಷಯಗಳನ್ನು ಆ ಲೇಖದಲ್ಲಿ ಬರೆಯಲಾಗಿದೆ. ಆಗ ಆ ಲೇಖವನ್ನು ಏನನ್ನಬೇಕು? ಅದು ಜಾಬು ಆಗುತ್ತದಾ? ಅಥವಾ ಉತ್ತರವಾಗುತ್ತದಾ?**

**ಉತ್ತರ :–** ಪ್ರೇಮದಿಂದ ಬರೆದಿರುವುದು, ಅಲ್ಲದೆ ಸಂಸಾರ ವಿಷಯಗಳಿಂದ ಕೂಡಿಕೊಂಡಿರುವುದು. ಆರ್ಥಿಕ ತೊಂದರೆಗಳ ವಿಷಯವೂ ಸಹ ಇದೆ. ಅದಕ್ಕು ಮೀರಿ ಅದರಲ್ಲಿ ಏನು ಇಲ್ಲ. ಆ ಲೇಖನದಲ್ಲಿ ಪ್ರಪಂಚ ವಿಷಯಗಳು ಹೊರತು ದೈವಿಕವಾದ ವಿಷಯಗಳು ಯಾವುವು ಇಲ್ಲ. ಆದ್ದರಿಂದ ಸೂತ್ರದ ಪ್ರಕಾರ ಆ ಲೇಖವನ್ನು ಸ್ಪಷ್ಟವಾಗಿ ಜಾಬು ಎನ್ನಬಹುದು ಆದರೆ, ಉತ್ತರ ಎನ್ನುವುದಕ್ಕೆ ಯಾವ ಮಾತ್ರ ಅವಕಾಶವಿಲ್ಲ.

**ಪ್ರಶ್ನೆ:– ಒಬ್ಬ ಸ್ನೇಹಿತನು ಇನ್ನೊಬ್ಬ ಸ್ನೇಹಿತನಿಗೆ ಬರೆದ ಲೇಖನದಲ್ಲಿ ಸ್ವಲ್ಪ ಪ್ರಪಂಚ ವಿಷಯ ಇರುವಾಗ, ಸ್ವಲ್ಪ ದೈವಜ್ಞಾನವು ಕೂಡ ಇದೆ. ಆಗ ಅದನ್ನು ಏನನ್ನಬೇಕು?**

**ಉತ್ತರ :–** ಪ್ರಪಂಚ ಸಂಬಂಧ ವಿಷಯ, ಪರಮಾತ್ಮ ಸಂಬಂಧ ವಿಷಯಗಳು ಎರಡೂ ಲೇಖನಗಳಲ್ಲಿ ಇರುವಾಗ ಯಾವುದು ಹೆಚ್ಚು, ಯಾವುದು ಕಡಿಮೆ ಇದೆಯೆಂದು ಲೆಕ್ಕಹಾಕಿ ನೋಡಬೇಕು. ಆಗ ಯಾವ ವಿಷಯ ಹೆಚ್ಚಾಗಿರುತ್ತದೊ ಆ ವಿಷಯ ಸಂಬಂಧವಾಗಿ ಆ ಲೇಖವನ್ನು ಗುರುತಿಸಬೇಕು. ಅದರಲ್ಲಿ ದೈವಸಂಬಂಧ ವಿಷಯಗಳೇ ಹೆಚ್ಚಾಗಿರುವುದಾದರೆ ಅದನ್ನು ಉತ್ತರವಾಗಿ ಹೇಳಬೇಕು. ಒಂದುವೇಳೆ ಪ್ರಪಂಚ ಸಂಬಂಧ ವಿಷಯಗಳು ಹೆಚ್ಚಾಗಿರುವುದಾದರೆ ಅದನ್ನು ಜಾಬಿನ ಕೆಳಗೆ ಜಮಕಟ್ಟಬೇಕು.

**ಪ್ರಶ್ನೆ :– ಇಲ್ಲಿಯವರೆಗು ನೀವು ಹೇಳಿದ ಸಮಾಚಾರವನ್ನನುಸರಿಸಿ ಬರೆಯಲ್ಪಟ್ಟ ಸಮಾಚಾರ ಯಾವುದಾದರೂ ಅದು ಲೇಖನೆಯ ಕೆಳಗೆ ಜಮಕಟ್ಟಲಾಗುತ್ತದೆ. ಬರೆಯಲಾದ ಸಮಾಚಾರ ಚಿಕ್ಕ ಕಾಗದದಲ್ಲಿದ್ದರೂ, ದೊಡ್ಡ ಗ್ರಂಥದಲ್ಲಿದ್ದರೂ ಬರೆದ ಸಮಾಚಾರವನ್ನನುಸರಿಸಿ ಅದು ಜಾಬಿನ ಕೆಳಗೊ ಅಥವಾ ಉತ್ತರದ ಕೆಳಗೊ ಜಮಕಟ್ಟಲಾಗುತ್ತದೆ. ಈಗ ಜವಹಾರ್‌ಲಾಲ್ ನೆಹರು ತನ್ನ ಮಗಳಾದ ಇಂದಿರಾ ಗಾಂಧಿಗೆ ಬರೆದ ಲೇಖವನ್ನು ನೋಡಿ, ಅದನ್ನು ಜಾಬು ಎನ್ನಬಹುದಾ ಅಥವಾ ಉತ್ತರ ಎನ್ನಬಹುದಾ ನೀವೆ ಯೋಚಿಸಿರಿ?**

**ಉತ್ತರ :–** ಈ ಲೇಖ ಮೇಲ್ನೋಟಕ್ಕೆ ಪ್ರಪಂಚ ವಿಷಯವನ್ನು ಬೋಧಿಸಿದಂತೆ ಕಾಣಿಸಿದರೂ, ಮನುಷ್ಯನನ್ನು ಉನ್ನತ ಸ್ಥಿತಿಗೆ ಕಳಿಸುವ ಸಮಾಚಾರದಂತೆ ಇದೆ. ಇದು ಪೂರ್ತಿ ದೇವರ ವಿಷಯ ಅಲ್ಲದಿದ್ದರೂ ಭವಿಷ್ಯತ್ತಿನಲ್ಲಿ ದೈವಮಾರ್ಗದಕಡೆ ದೃಷ್ಟಿ ಮರಳಿಸುವಂತೆ ಇರುವುದರಿಂದ ಈ ಲೇಖವನ್ನು 'ಜಾಬು' ಎನ್ನದಂತೆ 'ಉತ್ತರ' ಎನ್ನುವುದೆ ಒಳ್ಳೆಯದು. ಈ ವಿಧವಾಗಿ ಕೆಲವು ಸಂದಿಗ್ಧ ಸಮಾಚಾರಗಳನ್ನು ನೋಡಿ ಅದು ಭವಿಷ್ಯತ್ತಿನಲ್ಲಿ ದೇವರಕಡೆಗೆ

**ಪ್ರಮುಖರ ಲೇಖ**



# ಇಂದೂ ದೇಶವೇ ಇಂಡಿಯಾ!

**ಹಿ**ಮಾಲಯಗಳಿಗೂ, ವಿಂಧ್ಯ ಪರ್ವತಗಳಿಗೂ ಮಧ್ಯದಲ್ಲಿ ಆಗಿನ ಆರ್ಯಾ ಪ್ರವರ್ತನೆ (ಆರ್ಯರ ಭೂಭಾಗ) ಎಲ್ಲಿ ಇದೆಯೋ ನಮ್ಮ ದೇಶಪಟದಲ್ಲಿ ನೀನು ನೋಡಿದ್ದೀಯ. ಅದು "ಬಾಲ ಚಂದ್ರಾಕಾರ" ಎಂದರೆ ಉದಯಿಸುವ ಚಂದ್ರಾಕಾರ ಎನ್ನುವ ಅರ್ಥ ಇರುವಂತೆ ಕಾಣಿಸುತ್ತದೆ. ಅದಕ್ಕೇ ಆರ್ಯಾವರ್ತನಕ್ಕೆ ಇಂದೂ ದೇಶವೆಂದು ಹೆಸರು ಬಂದಿದೆ. ಇಂದೂ ದೇಶವೇ ಹಿಂದೂ ದೇಶವಾಗಿ ಮಾರ್ಪಾಟಾಗಿದೆ.

ರಾಮಯಣ ಹುಟ್ಟಿದ ದೀರ್ಘ ಕಾಲಕ್ಕೆ ಮಹಾಭಾರತ ಹುಟ್ಟಿದೆ. ಅದು ರಾಮಾಯಣಕ್ಕಿಂತ ದೊಡ್ಡ ಗ್ರಂಥ. ಅದರಲ್ಲಿ ಹೇಳಿರುವುದು ಆರ್ಯ ದ್ರಾವಿಡರ ಯುದ್ಧವಲ್ಲ. ಆರ್ಯರ ಮಧ್ಯ ಏರ್ಪಟ್ಟ ಕುಟುಂಬ ಕಲಹವೇ ಭಾರತಕಥೆ. ಭಾರತದಲ್ಲಿ ಹೇಳಿದ ಕಥೆಗಳು, ಧರ್ಮಗಳು ಅಷ್ಟಿಷ್ಟಲ್ಲ. ಅವು ಬಹಳ ಸುಂದರವಾಗಿ, ಗಂಭೀರವಾಗಿ ಇರುತ್ತವೆ. ಇವೆಲ್ಲವುಗಳಿಗಿಂತ ದೊಡ್ಡದಾದ ಭಗವದ್ಗೀತೆ ಎನ್ನುವ ಮಹಾಗ್ರಂಥ ಮಹಾಭಾರತದಲ್ಲಿ ಇರುವ ಕಾರಣದಿಂದ ಅದು ನಮ್ಮೆಲ್ಲರಿಗೂ ಪ್ರಿಯತಮ ವಾದದ್ದಾಗಿದೆ. ಸಾವಿರ ವರ್ಷಗಳ ಕೆಳಗೇ ನಮ್ಮ ದೇಶದಲ್ಲಿ ಇಂತಹ ವಿಶೇಷವಾದ ಗ್ರಂಥಗಳು ಹುಟ್ಟಿವೆ. ಮಹಾನುಭಾವರೇ ಇವುಗಳನ್ನು ಬರೆದಿರುತ್ತಾರೆ. ಈ ಗ್ರಂಥಗಳು ಹುಟ್ಟಿ ಇಷ್ಟು ಕಾಲ ಕಳೆದರೂ ಅವುಗಳನ್ನು ಕುರಿತು ತಿಳಿದುಕೊಳ್ಳದಂತಹ ಮಕ್ಕಳು ಮತ್ತು ಪ್ರಯೋಜನವನ್ನು ಪಡೆಯದ ಹಿರಿಯರಂತೂ ಇರುವುದಿಲ್ಲ.

**ನೆಹರೂ ಇಂದಿರಗೆ ಬರೆದ ಲೇಖನೆಯಿಂದ**

ಹೋಗುವಂತೆ ಮಾಡುತ್ತದೆ ಇದನ್ನನುಸರಿಸಿ ಅವುಗಳನ್ನು ಜಾಬಾಗಿಯೊ, ಉತ್ತರವಾಗಿಯೊ ನಿರ್ಣಯಿಸಬಹುದು.

**ಪ್ರಶ್ನೆ :– ಒಬ್ಬ ರಾಜಕೀಯ ನಾಯಕನಿಗೆ, ಅಂದರೆ ಒಬ್ಬ ಮಂತ್ರಿ ಪದವಿಯನ್ನು ಹೊಂದಿ ಅಧಿಕಾರದಲ್ಲಿರುವ ವ್ಯಕ್ತಿಗೆ ನೀವು ಲೇಖವನ್ನು ಬರೆದರೆ ಯಾವ ಪದ್ಧತಿಯಲ್ಲಿ ಬರೆಯುತ್ತೀರಾ? ಜಾಬಾಗಿ ಬರೆಯುತ್ತೀರಾ? ಉತ್ತರವಾಗಿ ಬರೆಯುತ್ತೀರಾ?**

**ಉತ್ತರ :–** ನಾನು ಲೇಖ ಬರೆದರೆ ಉತ್ತರವಾಗಿ ಬರೆಯುತ್ತೇನೆ. ಜಾಬಾಗಿ ಬರೆಯಬೇಕಾದ ಅವಶ್ಯಕತೆ ಯಾವಮಾತ್ರ ಇರುವುದಿಲ್ಲ. ನಾವು ಇರುವ ಸ್ಥಿತಿಯನ್ನನುಸರಿಸಿ ಇನ್ನೊಬ್ಬ ವ್ಯಕ್ತಿಗೆ ಲೇಖ ಬರೆಯುವುದು ಇರುತ್ತದೆ. ನಾನು ಲೇಖವನ್ನು ಬರೆಯುವ ವ್ಯಕ್ತಿ ನನಗಿಂತ ಉತ್ತಮನಾದರೆ ಆತನಿಗೆ ನಾನು ಭಯಪಡುತ್ತಾ, ಆತನನ್ನು ಗೌರವಿಸುತ್ತಾ, ಲೇಖವನ್ನು ಬರೆಯಬೇಕಾಗಿ ಬರುತ್ತದೆ. ಕೆಲವು ವಿಷಯಗಳನ್ನು ಹೇಳುವಾಗ ವಿನಯ ಪೂರ್ವಕವಾಗಿ ಹೇಳಬೇಕಾಗಿರುತ್ತದೆ. ಏನಾದರೂ ಮಾಡಬೇಕಿರುವುದು ಹೇಳಬೇಕಿದ್ದರೆ ಬೇಡಿಕೊಂಡಂತೆ ಎಷ್ಟೋ ವಿನಯದಿಂದ ಹೇಳಬೇಕಾಗಿರುತ್ತದೆ. ಯಾವ ಮಾತು ಹೇಳಿದರೂ ಪ್ರಾರ್ಥೇಯಪಟ್ಟು ಹೇಳಿದಂತಿರುತ್ತದೆ. ಏನಾದರೂ ಸ್ವಂತ ಭಾವನೆಯನ್ನು ಹೇಳಬೇಕಾಗಿ ಬಂದರೂ, ನನ್ನ ಮಾತು ಅಲ್ಲವೆನ್ನುವಂತೆ ಇತರರ ಮಾತೆನ್ನುವಂತೆ ಸರಿದೂಗಿಸಿ ಹೇಳಬೇಕಾಗಿರುತ್ತದೆ.

**ಪ್ರಶ್ನೆ :– ರಾಜಕೀಯ ನಾಯಕರು ನಿಮಗಿಂತ ದೊಡ್ಡವರೇ ಅಲ್ಲವೆ! ಅವರಿಗೆ ನಿಮ್ಮ ಮಾತುಗಳು ಸರಿಹೋಗುತ್ತವಾ?**

**ಉತ್ತರ :–** ಯಾವ ವಿಷಯವನ್ನಾದರೂ 'ನಾವು ಒಪ್ಪಿಕೊಂಡರೇನೆ', 'ನೀವು ಹೇಳಿದರೇನೆ' ಎನ್ನುವ ಭಾವನೆಯನ್ನು ಬಿಟ್ಟುಬಿಡಿ. ನಾವು ಹೇಳಿರುವುದು ಇತರರಿಗೆ ಇಷ್ಟವಾಗಬಹುದು. ಇಷ್ಟವಾಗದಿರಬಹುದು. 'ನಮ್ಮ ಮಾತೇ ಮುಖ್ಯ' ಎನ್ನುವ ಉದ್ದೇಶದಿಂದ ನಾವು ಹೇಳುತ್ತಿಲ್ಲ. ಏನಾದರೂ ಬ್ರಹ್ಮವಿದ್ಯಾಶಾಸ್ತ್ರ ಪದ್ಧತಿಯನ್ನು ಅನುಸರಿಸಿ ನಾವು ಹೇಳುತ್ತೇವೆ. ಶಾಸ್ತ್ರಪದ್ಧತಿ ಪ್ರಕಾರ

ನಡೆಯಬೇಕೆಂದವರಿಗೆ ಮಾತ್ರ ನಮ್ಮ ಮಾತುಗಳು ಕೆಲಸಕ್ಕೆ ಬರುತ್ತವೆ. ಶಾಸ್ತ್ರಪದ್ಧತಿಯನ್ನು ಅನುಸರಿಸಿ ಅವರಿಗೆ ನಮ್ಮ ಮಾತುಗಳು ಅನ್ವಯಿಸುವುದಿಲ್ಲ.

**ಪ್ರಶ್ನೆ :– ದೇಶದಲ್ಲಿ ಎಷ್ಟೋಜನ ಪ್ರಜೆಗಳು ಎಷ್ಟೋ ರಂಗಗಳಲ್ಲಿ ಕೆಲಸ ಮಾಡುತ್ತಿದ್ದಾರೆ. ಅವರವರ ಆಸಕ್ತಿಯನ್ನನುಸರಿಸಿ ಅವರು ಆಯಾರಂಗಗಳಲ್ಲಿ ಕೆಲಸ ಮಾಡುತ್ತಿದ್ದರು. ದೇಶದಲ್ಲಿ ಎಷ್ಟೋ ರಂಗಗಳು ಇವೆ. ಎಲ್ಲಾ ರಂಗಗಳಿಗಿಂತ ದೊಡ್ಡದು ರಾಜಕೀಯವೆಂದು ಹೇಳುತ್ತಿದ್ದೀರ, ಪ್ರಪಂಚದಲ್ಲಿ ಮನುಷ್ಯ ಬದುಕುವುದಕ್ಕೆ ಎಷ್ಟೋ ರಂಗಗಳಿದ್ದರೂ ಅವುಗಳಲ್ಲಿ ಅತ್ಯಂತ ಬೆಲೆಯುಳ್ಳದ್ದು ರಾಜಕೀಯವೆಂದು ಬಹಳಜನ ರಾಜಕೀಯವನ್ನು ಆಶ್ರಯಿಸುತ್ತಿದ್ದಾರೆ. ನೀವು ಎಲ್ಲದಕ್ಕಿಂತ ದೊಡ್ಡದಾದ ಅದರಲ್ಲಿದ್ದೇನೆಂದು ಹೇಳುತ್ತಿದ್ದೀರ. ಆದರೆ ನೀವು ರಾಜಕೀಯದಲ್ಲಿ ಇಲ್ಲದೆ ಆಧ್ಯಾತ್ಮಿಕದಲ್ಲಿ ಇದ್ದೀರಾ ಅಲ್ಲವೆ! ಎಲ್ಲದಕ್ಕಿಂತ ರಾಜಕೀಯ ದೊಡ್ಡದೆಂದು ನೀವು ಕೂಡಾ ಹೇಳುವುದು ನಾವು ಕೇಳಿದ್ದೇವೆ. ಹಾಗಿರುವಾಗ ನೀವು ರಾಜಕೀಯದಲ್ಲಿ ಇಲ್ಲದಿರುವಾಗ, ಆಧ್ಯಾತ್ಮಿಕದಲ್ಲಿ ಇರುವಾಗ ನೀವು ಆಧ್ಯಾತ್ಮಿಕದಲ್ಲಿ ಇರುತ್ತಾ ನಾವು ಉತ್ತಮವಾದ ರಂಗದಲ್ಲಿದ್ದೇವೆನ್ನುವುದು ಸರಿಯಾದ ಮಾತು ಅಲ್ಲ ತಾನೆ!**

**ಉತ್ತರ :–** ನೀವು ಕೇಳುವ ಪ್ರಶ್ನೆಗಳೆಲ್ಲ ಮೂಗಿನಲ್ಲಿ ಕೂದಲನ್ನು ಹಿಡಿದು ಎಳೆದಂತೆ, ಮೂತಿಮೇಲಿನ ಮೀಸೆಯನ್ನು ಹಿಡಿದುಕೊಂಡು ಎಳೆದಂತೆ ಇರುತ್ತವೆ. ಮೂಗಿನನೇರವಾಗಿ ಕೇಳುವ ನಿನ್ನ ಪ್ರಶ್ನೆಗಳಿಗೆ ನಾಲಿಗೆ ಸೂಟಿಯಾಗಿ ಉತ್ತರವನ್ನು ಹೇಳದೆ ತಪ್ಪುವುದಿಲ್ಲ. ರಾಜಕೀಯ ದೊಡ್ಡದೆಂದು ನಾನು ಅನೇಕಸಲ ಹೇಳುವುದು ನಿಜವೇ. ನಾನು ಎಲ್ಲದಕ್ಕಿಂತ ದೊಡ್ಡ ರಂಗವಾದ ಆಧ್ಯಾತ್ಮಿಕ ರಂಗದಲ್ಲಿದ್ದೇನೆಂದು ಹೇಳುವುದು ಸಹ ವಾಸ್ತವವೇ. ಆದರೆ ಆಧ್ಯಾತ್ಮಿಕ ರಾಜಕೀಯವನ್ನು ಎರಡನ್ನು ನೋಡಿದ ನೀವು ಅಪಾರ್ಥದಿಂದ ಮೇಲಿನ ಪ್ರಶ್ನೆಗಳನ್ನು ಕೇಳಿದ್ದೀರೆಂದು ಕೊಳ್ಳುತ್ತೇನೆ. ನಿಜ ಹೇಳಬೇಕೆಂದರೆ ಈದಿನ ನೀವು ರಾಜಕೀಯವೆಂದು ಏನನ್ನು ಅಂದುಕೊಳ್ಳುತ್ತಿದ್ದೀರೊ ಅದು ರಾಜಕೀಯವಲ್ಲ. ರಾಜಕೀಯವನ್ನು ಕುರಿತು ವಿವರವಾಗಿ ಹೇಳಿಕೊಂಡರೆ ಅದು ಇದು ಅಲ್ಲವೆಂದು ತಿಳಿಯಬಲ್ಲದು.

ರಾಜಕೀಯವನ್ನು ಬಿಡಿಸಿ ನೋಡಿದರೆ ರಾಜ+ಕೀಯ= ರಾಜಕೀಯ ಎನ್ನುವ ಎರಡು ಪದಗಳ ಕೂಡಿಕೆಯಿಂದ ರಾಜಕೀಯ ಇದೆ. **'ಕೀಯ' ಎನ್ನುವ ಪದ 'ಕ್ರಿಯೆ'** ಎನ್ನುವ ಶಬ್ಧದಿಂದ ಹುಟ್ಟಿದೆ. ಕ್ರಿಯೆ ಎಂದರೆ ಕೆಲಸ ಅಥವಾ ಕಾರ್ಯ ಎಂದು ಅರ್ಥ. ಮನುಷ್ಯನಿಂದ ಮಾಡುವ ಕಾರ್ಯವನ್ನು ಕೀಯೆ ಎನ್ನುತ್ತೇವೆ. ಮನುಷ್ಯ ಎಷ್ಟು ಕೆಲಸಗಳು ಮಾಡಿದರೂ ಆ ಕೆಲಸಗಳಲ್ಲಿ ಒಳ್ಳೆಯ ಕೆಟ್ಟ ಎನ್ನುವ ಎರಡು ವಿಧಗಳ ಕೆಲಸಗಳಿರುವವು. ಅವುಗಳನ್ನೇ ದೊಡ್ಡ ಕೆಲಸಗಳೆಂದೂ, ದೊಡ್ಡ ಅಲ್ಲದ ಕಡಿಮೆ ಕೆಲಸಗಳೆಂದು ಎರಡು ವಿಧಗಳಲ್ಲಿ ವಿಭಜಿಸಲ್ಪಟ್ಟಿವೆ. ದೊಡ್ಡ ಕೆಲಸಗಳು **ರಾಜ** ಎಂದೂ, ಚಿಕ್ಕ (ಕಡಿಮೆ)ಕೆಲಸಗಳನ್ನು **ನೀಚ** ಎಂದೂ ಹೇಳುತ್ತಿದ್ದರು. ಎಲ್ಲರಿಗಿಂತ ದೊಡ್ಡದು 'ರಾಜ' ಆದ್ದರಿಂದ ದೊಡ್ಡ ಕಾರ್ಯವನ್ನು **ರಾಜಕೀಯ** ಎನ್ನುತ್ತಿದ್ದೇವೆ. ಬೆಲೆಯಿಲ್ಲದ, ಉತ್ತಮವಲ್ಲದ ಕೆಲಸಗಳನ್ನು **ನೀಚಕೀಯ** ಎನ್ನುತ್ತೇವೆ. ರಾಜಕೀಯಕ್ಕೆ ವಿರುದ್ಧಪದ ನೀಚಕೀಯ ಎನ್ನುತ್ತಿದ್ದೇವೆ. ಭೂಮಿಮೇಲೆ ರಾಜಕೀಯ ಯಾವುದು ಎನ್ನುವುದನ್ನು ತಿಳಿಯದ ಮನುಷ್ಯರು, ಪ್ರಜೆಗಳನ್ನು ಪಾಲಿಸುವ ಸರ್ಕಾರ ವಿಧಾನವಾದ ಕೆಲಸಗಳನ್ನು ರಾಜಕೀಯ ಎಂದು ತಿಳಿದುಕೊಳ್ಳುತ್ತಿದ್ದಾರೆ. ದೇಶದಲ್ಲಿ ಸರ್ಕಾರ ವಿಧಾನವೇ ರಾಜಕೀಯ ವಾದರೆ ಆಧ್ಯಾತ್ಮಿಕ ಅದಕ್ಕಿಂತ ಚಿಕ್ಕದಾಗಿಹೋಗುತ್ತದೆ. ವಾಸ್ತವಿಕವಾಗಿ ಭಗವದ್ಗೀತೆ ಯಲ್ಲಿ ದೇವರು ಭಗವಂತನಾಗಿ ಹೇಳಿದ ಮಾತನ್ನನುಸರಿಸಿ ನೋಡಿದರೆ ನಾವು ಈಗ ರಾಜಕೀಯವೆಂದು ಏನನ್ನು ಅಂದುಕೊಳ್ಳುತ್ತಿದ್ದೇವೋ ಅದು ರಾಜಕೀಯವಲ್ಲ. ಭಗವದ್ಗೀತೆಯಲ್ಲಿನ ಬ್ರಹ್ಮವಿದ್ಯಾ ಶಾಸ್ತ್ರದ ಪ್ರಕಾರ **ಆಧ್ಯಾತ್ಮಿಕವೇ ನಿಜವಾದ ರಾಜಕೀಯ**. ಭಗವದ್ಗೀತೆಯಲ್ಲಿ ಪ್ರತ್ಯೇಕಿಸಿ ಒಂದು ಅಧ್ಯಾಯದ ಹೆಸರು ರಾಜವಿದ್ಯಾ, ರಾಜಗುಹ್ಯ ಯೋಗ ಎನ್ನುವುದು ಇದೆ. ರಾಜ ಎಂದರೆ ಎಲ್ಲದಕ್ಕಿಂತ ದೊಡ್ಡದೆಂದು ಅರ್ಥ. ಎಲ್ಲದಕ್ಕಿಂತ ದೊಡ್ಡವಿದ್ಯೆ ಎಂದು ಆಧ್ಯಾತ್ಮಿಕ ವಿದ್ಯೆಯನ್ನೇ ಕರೆಯುತ್ತಿರುವುದರಿಂದ ಅದನ್ನು **'ರಾಜವಿದ್ಯೆ'** ಎಂದು ಹೇಳಿದ್ದಾರೆ. ಹಾಗೆ **'ರಾಜಗುಹ್ಯ'** ಎಂದರೆ ದೊಡ್ಡ ರಹಸ್ಯ ಎಂದು ಅರ್ಥ. ರಹಸ್ಯಗಳಲ್ಲೆ ದೊಡ್ಡ ರಹಸ್ಯವಾದ ಆಧ್ಯಾತ್ಮಿಕವನ್ನು (ದೈವ ಜ್ಞಾನವನ್ನು) ಹೇಳುವಾಗ ಭಗವಂತನು ರಾಜಗುಹ್ಯ ಎನ್ನುವ ಪದವನ್ನು ಉಪಯೋಗಿಸಿದ್ದಾನೆ. ಇದರಪ್ರಕಾರ

ಪ್ರಪಂಚದಲ್ಲಿ ಆಧ್ಯಾತ್ಮಿಕವಾದ ದೇವರ ಜ್ಞಾನವೇ ಎಲ್ಲದಕ್ಕಿಂತ ದೊಡ್ಡದೆಂದು ತಿಳಿಯುತ್ತಿದೆ. ಜ್ಞಾನಕ್ಕಿಂತ ಪರಿಪಾಲನೆ ವಿಧಾನ ನೀಚಕೀಯವಾದುದು.

ಹೊರಗಿನ ಪ್ರಪಂಚದಲ್ಲಿ ಸರ್ಕಾರಪಾಲನೆ ವಿಧಾನ ಕಾರ್ಯಗಳನ್ನು ರಾಜಕೀಯ ಎನ್ನುವುದು ಎಲ್ಲರಿಗೂ ಅಭ್ಯಾಸವಾಗಿದೆ. ದೇವರು ಬ್ರಹ್ಮವಿದ್ಯಾ ಶಾಸ್ತ್ರದಲ್ಲಿ ಹೇಳಿದ ಪ್ರಕಾರ **ದೈವಜ್ಞಾನವನ್ನು ತಿಳಿದು ಅದರ ಪ್ರಕಾರ ಆಚರಿಸುವ ಯೋಗಕಾರ್ಯಗಳೇ ರಾಜಕೀಯಗಳು**. ಪೂರ್ವದಲ್ಲಿ ಪ್ರಜೆಗಳಲ್ಲಿ ರಾಜರಾದವರ ಹತ್ತಿರಕ್ಕೆ ಅಂದರೆ ಪರಿಪಾಲನೆ ಮಾಡುವ ರಾಜನಹತ್ತಿರಕ್ಕೆ ಜ್ಞಾನಿಗಳಾದ ಮಹಾರ್ಷಿಗಳು ಬರುತ್ತಿದ್ದರು. ರಾಜರೇ ಮಹರ್ಷಿಗಳನ್ನು ಆಹ್ವಾನಿಸಿ ಕರೆಯುತ್ತಿದ್ದರು. ಮಹರ್ಷಿಗಳು ಅವರಿಗೆ ಬಿಡುವಿನ ಸಮಯದಲ್ಲಿ ರಾಜರ ಹತ್ತಿರಕ್ಕೆ ಬರುತ್ತಿದ್ದರು. ಆ ಸಮಯದಲ್ಲಿ ರಾಜ ತನ್ನ ಸಿಂಹಾಸನದ ಮೇಲೆ ಕುಳಿತುಕೊಂಡಿದ್ದರೂ ಮಹರ್ಷಿಗಳನ್ನು ನೋಡಿದ ತಕ್ಷಣ ಎದ್ದು ಮಹರ್ಷಿಗಳಿಗೆ ಎದುರುಹೋಗಿ ನಮಸ್ಕರಿಸಿ, ಗೌರವಪೂರ್ವಕವಾಗಿ ಆಹ್ವಾನಿಸಿ, ಅವರನ್ನು ಕರೆದುಕೊಂಡು ಬಂದು ತನ್ನ ಸಿಂಹಾಸನದಲ್ಲಿ ಆಸೀನರಾಗುವಂತೆ ಆಹ್ವಾನಿಸುತ್ತಿದ್ದರು. ಆ ದೃಶ್ಯವನ್ನು ನೋಡಿದರೆ ಬಂದಿರುವ ಮಹರ್ಷಿ ರಾಜನಿಗಿಂತ ಎಷ್ಟೋ ದೊಡ್ಡವನೆಂದು ತಿಳಿಯುತ್ತಿತ್ತು. ಅಲ್ಲಿಗೆ ಮುಗಿಯದೆ ರಾಜ ಸ್ವತಃವಾಗಿ ಮಹರ್ಷಿ ಪಾದಗಳನ್ನು ತೊಳೆದು, ಆ ನೀರನ್ನು ತಲೆಮೇಲೆ ಹಾಕಿಕೊಳ್ಳುವುದು ಮಾಡುತ್ತಿದ್ದರು. ಪಾದಗಳನ್ನಿಡಿದು ನಮಸ್ಕರಿಸುವುದು, ಪಾದಗಳನ್ನು ತೊಳೆದು ನೀರು ಹಾಕಿಕೊಳ್ಳುವುದು, ತನ್ನ ಸಿಂಹಾಸನವನ್ನು ಮಹರ್ಷಿಗೆ ಕೊಡುವುದನ್ನು ನೋಡಿದರೆ ರಾಜನಿಗಿಂತ ಮಹರ್ಷಿ ಎಷ್ಟೋ ಪಾಲು ದೊಡ್ಡವನೆಂದು ತಿಳಿಯಬಲ್ಲದು.

ಇದೆಲ್ಲವೂ ಪ್ರತ್ಯೇಕ್ಷವಾಗಿ ನೋಡಿದ ನಂತರ ರಾಜನು ಮಾಡುವ ಸರ್ಕಾರದ ವಿಧಾನದ ಕಾರ್ಯಗಳಿಗಿಂತ, ಒಬ್ಬ ದೈವಜ್ಞಾನಿ ಮಾಡುವ ದೇವರ ವಿಧಾನವಾದ ಯೋಗಕಾರ್ಯಗಳೇ ದೊಡ್ಡವೆಂದು ತಿಳಿಯುತ್ತಿದೆ. ದೈವ ಧರ್ಮಗಳನ್ನು ತನ್ನ ಕಾರ್ಯಗಳಲ್ಲಿ ಜಾರಿ ಮಾಡುವುದು **ಯೋಗ** ಎನ್ನುತ್ತೇವೆ. ಹಾಗೆ ಜಾರಿ ಮಾಡುವುದು ಯೋಗ ಕಾರ್ಯಗಳು ಶ್ರೇಷ್ಠವಾಗಿರುವುದರಿಂದ

ಅವುಗಳನ್ನು ರಾಜಕೀಯ ಎಂದು ಕರೆದಿದ್ದಾರೆ. ಮನುಷ್ಯ ಮನುಷ್ಯರನ್ನು ಪಾಲಿಸುವುದಕ್ಕಿಂತ ಮನುಷ್ಯ ದೇವರ ಧರ್ಮಗಳನ್ನು ಆಚರಿಸುವುದು ಬಹಳ ಉತ್ತಮ. ಆದುದರಿಂದ **ಜ್ಞಾನಿ ಮಾಡುವ ಕಾರ್ಯಗಳನ್ನು ನಿಜವಾದ ರಾಜಕೀಯ** ಎಂದು ಹೇಳಬಹುದು. ನಿಜವಾಗಲು ರಾಜಕೀಯ ದೈವಜ್ಞಾನವನ್ನು ಆಚರಿಸುವ ಜ್ಞಾನಿಗಳ ಹತ್ತಿರವೇ ಇರುವುದರಿಂದ, ಭೂಮಿಯನ್ನು ಆಳುವ ರಾಜರು ಸಹಿತವು ಜ್ಞಾನಿಗಳನ್ನು ನಮಸ್ಕರಿಸುತ್ತಿದ್ದಾರೆ. ಮತ್ತು ಗೌರವಿಸುತ್ತಿದ್ದಾರೆ. ಈ ಲೆಕ್ಕ ಪ್ರಕಾರ ಜ್ಞಾನಿಗಳದೇ ನಿಜವಾದ ರಾಜಕೀಯವಾದಾಗ ಭೂಪಾಲಕರಾದ ರಾಜರನ್ನು ಅಂದರೆ ಪ್ರಸ್ತುತ ಸರ್ಕಾರದಲ್ಲಿ ನಾಯಕರಾಗಿ, ಮಂತ್ರಿಗಳಾಗಿ, ರಾಷ್ಟ್ರಪತಿಗಳಾಗಿ, ಮುಖ್ಯಮಂತ್ರಿಗಳಾಗಿ, ಪ್ರಧಾನ ಮಂತ್ರಿಗಳಾಗಿದ್ದು ಪ್ರಜೆಗಳನ್ನು ಆಳುವ ಕಾರ್ಯಗಳನ್ನು ಮಾಡುವ ಪ್ರಜಾ ನಾಯಕರದು ರಾಜಕೀಯ ಅಲ್ಲದಿದ್ದರೆ ಅವರು ಮಾಡುವ ಕೆಲಸಗಳನ್ನು ಏನನ್ನಬೇಕು? ಅವರನ್ನು ಏನನ್ನಬೇಕು? ಎನ್ನುವ ಪ್ರಶ್ನೆ ಬರುತ್ತದೆ. ಅದಕ್ಕೆ ಸಮಾಧಾನ ಈ ವಿಧವಾಗಿ ಇದೆ.

ಈ ದಿನವಾಗಲಿ ಪೂರ್ವದಲ್ಲಾಗಲಿ ಪಾಲನೆ ವಿಧಾನವನ್ನು ಕೈಗೊಳ್ಳುವವರನ್ನು ರಾಜರೆನ್ನುವುದು ಪರಂಪರೆಯಾಗಿದೆ. ಕೃತಯುಗದಲ್ಲಿ ಪ್ರಜೆಗಳನ್ನು ಪಾಲಿಸುವವರನ್ನು ರಾಜರು ಎನ್ನುವವರಲ್ಲ. ಒಬ್ಬ ಶಿಶುವಿಗೆ ತಾಯಿ ಎಷ್ಟೋ ಸೇವೆಗಳು ಮಾಡಿ ಜಾಗ್ರತೆ ಮಾಡುವುದನ್ನು ನೋಡುತ್ತಿದ್ದೇವೆ. ಹಾಗೆ ಒಬ್ಬ ವ್ಯಕ್ತಿ ಪ್ರಜೆಗಳ ಆಲನೆ, ಪಾಲನೆ ಮಾಡುವುದು ನಡೆಯುತ್ತಿದೆ. ತಾಯಿಮಕ್ಕಳಿಗೆ ಎಲ್ಲಾ ವಿಧಗಳು ಸೇವೆಮಾಡಿ ಶಿಶುವಿಗೆ ಬೇಕಾದ ಸೌಕರ್ಯಗಳನ್ನು ಕಲ್ಪಿಸುವಂತೆ, ಪ್ರಜೆಗಳನ್ನು ತನ್ನ ಮಕ್ಕಳಂತೆ ನೋಡುತ್ತಾ ಪ್ರಜೆಗಳಿಗೆ ಬೇಕಾದ ಸೌಕರ್ಯಗಳನ್ನು ಒದಗಿಸಿ, ಅವರ ಜಾಗ್ರತೆ ಸಕ್ರಮವಾಗಿ ನೋಡುವ ವ್ಯಕ್ತಿಯನ್ನು ತಮ್ಮ ಪಾಲಕನನ್ನಾಗಿ ಪ್ರಜೆಗಳು ಹೇಳಿಕೊಳ್ಳುತ್ತಿದ್ದರು. ಮಕ್ಕಳಿಗೆ ತಾಯಿ ಹೇಗೆ ಸೇವೆ ಮಾಡುತ್ತಿದ್ದಾಳೋ ಹಾಗೆಯೇ ಒಬ್ಬ ಪಾಲಕನು ತನ್ನ ಪ್ರಜೆಗಳಿಗೆ ಸೇವೆ ಮಾಡುವುದರಿಂದ ಆತನನ್ನು ಪ್ರಜಾ ಸೇವಕನು ಎನ್ನುತ್ತಿದ್ದರು. ಪೂರ್ವದಲ್ಲಿ ಪ್ರಜಾ ಸೇವಕರಾಗಿ ಎಷ್ಟೋಜನ ಕಾಲ ಕಳೆದುಹೋಗಿದ್ದಾರೆ. ಸ್ವಲ್ಪ ಕಾಲ ಕಳೆದನಂತರ ಪ್ರಜೆಗಳಿಗೆ ಸೇವೆ ಮಾಡುವವರು ತಮ್ಮ ಸೇವಕನಾಗಲ್ಲದೆ, ರಾಜನಾಗಿ

ಹೇಳಿಕೊಳ್ಳುವುದು ನಡೆದಿದೆ. ಹಾಗೆ ರಾಜನಾಗಿ ಹೇಳಿಕೊಂಡ ನಂತರ ರಾಜನಾಗಿರುವವನು ಪ್ರಜೆಗಳ ಸೇವೆ ಮಾಡುವುದು ಬಿಟ್ಟು, ಪ್ರಜೆಗಳಿಂದ ಸೇವೆ ಮಾಡಿಸಿಕೊಳ್ಳುವುದಕ್ಕೆ ಮೊದಲು ಮಾಡಿದ್ದಾನೆ. ಅದಕ್ಕಿಂತ ಪೂರ್ವದಲ್ಲಿ ಸೇವಕರಾಗಿರುವವರು ಪ್ರಜೆಗಳ ಕ್ಷೇಮಕ್ಕಾಗಿ ಕಷ್ಟಪಡುತ್ತಿದ್ದರು. ಪ್ರಜಾ ಸೇವಕರಾಗಿರುವವರು ಪ್ರಜೆಗಳಿಗೆ ರಾಜರಾಗಿ ತಯಾರಾದ ನಂತರ ಪ್ರಜೆಗಳಿಗೆ ಸೇವೆ ಮಾಡುವುದು ಬಿಟ್ಟು ಪ್ರಜೆಗಳಿಂದ ಸೇವೆ ಮಾಡಿಸಿಕೊಳ್ಳುವುದು ಪ್ರಾರಂಭಿಸಿದ್ದಾರೆ.

ತಾಯಿ ತನ್ನ ಮಕ್ಕಳನ್ನು ಎಷ್ಟೋ ಪ್ರೀತಿಯಿಂದ ನೋಡಿಕೊಳ್ಳುವುದನ್ನು ಬಿಟ್ಟು ತನ್ನ ಮಾತನ್ನು ಕೇಳದ ಮಕ್ಕಳನ್ನು ಚಿತ್ರಹಿಂಸೆಗಳಿಟ್ಟು ಸಾಯಿಸಿದ್ದಾಳೆಂದುಕೊ! ಆಗ ಆಕೆಯನ್ನು ತಾಯಿ ಎನ್ನುವುದಿಲ್ಲ. ಆ ಮಕ್ಕಳ ಪಾಲಿಗೆ ರಾಕ್ಷಸಿ ಎನ್ನುತ್ತೇವೆ. ಹಾಗೆ ಪ್ರಜೆಗಳಿಗೆ ಸೇವೆ ಮಾಡುತ್ತೇನೆಂದು ಮುಂದಕ್ಕೆ ಬಂದು ಪ್ರಜೆಗಳ ಪಾಲನೆ ಕರ್ತವ್ಯದಲ್ಲಿ ಪ್ರಜೆಗಳ ಜಾಗ್ರತೆ ನೋಡದಂತೆ, ಪ್ರಜೆಗಳನ್ನು ಸ್ವಲ್ಪವೂ ಹಿಡಿಸಿಕೊಳ್ಳದೆ ತನಗೆ ಎದುರು ತಿರುಗಿದವರನ್ನು, ತನಗೆ ವಿರುದ್ಧವಾಗಿ ಮಾತನಾಡಿದವರನ್ನು ಹಿಂಸೆಗಳಿಗೆ ಗುರಿಮಾಡಿ, ಜೈಲಿನಲ್ಲಿ ಹಾಕಿ ಬಾಧಿಸುವವರು ಅವಕಾಶವಿದ್ದರೆ ಸಾಯಿಸುವವರಿದ್ದರೆ ಅವರನ್ನು ಪ್ರಜಾಸೇವಕರೆನ್ನುವುದಕ್ಕೆ ಬದುಲು ಅವರನ್ನು ಪ್ರಜಾ ಭಕ್ಷಕರೆನ್ನಬೇಕು. ರಾಕ್ಷಸರೆಂದು ಹೇಳಬೇಕು.

ಈದಿನ ಪ್ರಜಾಪಾಲನೆ ವಿಧಾನದಲ್ಲಿ ನಡೆಯುವುದು ಪ್ರಜೆಗಳ ಸೇವೆ ಅಲ್ಲ. ಪ್ರಜೆಗಳೊಂದಿಗೆ ಸೇವೆ ಮಾಡಿಸಿಕೊಳ್ಳುವುದು, ಅವರಮಾತು ಕೇಳದವರನ್ನು, ಅವರಿಗೆ ವಿರೋಧವಾಗಿ ಇರುವವರನ್ನು ಕೇಸುಗಳಲ್ಲಿ ಸಿಲುಕಿಸಿ ಪೋಲೀಸರು ಬಾಧಿಸುವುದು, ಆರ್ಥಿಕವಾಗಿ ತೊಂದರೆಗೀಡು ಮಾಡುವುದು ನಡೆಯುತ್ತಿದೆ. ತಮ್ಮ ಮಾತನ್ನೇ ಪ್ರಜೆಗಳು ಕೇಳಬೇಕು ಎನ್ನುವವರು ಈದಿನ ಪ್ರಜಾಸೇವಕರ ಮುಸುಗಿನಲ್ಲಿ ಪಾಲನೆ ವಿಧಾನದಲ್ಲಿದ್ದಾರೆ. ಪಾಲನೆ ವಿಧಾನದಲ್ಲಿ ತೊಂಭತ್ತುಜನ ಪ್ರಜಾಪೀಡಿತರಿದ್ದು ಕೇವಲ ಹತ್ತುಜನ ಪ್ರಜಾಸೇವಕರಿದ್ದರೂ, ಅವರನ್ನು ಕೂಡಾ ನಂಬಲಾರದೆ ಎಲ್ಲರೊಂದಿಗೆ ಅವರನ್ನು ಕೂಡ ಪ್ರಜಾಪೀಡಿತರನ್ನಾಗಿಯೇ

ಅನುಮಾನಿಸಬೇಕಾಗಿದೆ. ಒಟ್ಟಾರೆ ಆಧ್ಯಾತ್ಮಿಕ ರಾಜನಂತೆ. ಪ್ರಜಾಪಾಲನೆ ವಿಧಾನ ಆಧ್ಯಾತ್ಮಿಕಕ್ಕಿಂತ ಎಲ್ಲಾ ಕೋನಗಳಲ್ಲಿಯೂ ಕಡಿಮೆಯದು. ಆದ್ದರಿಂದ ಆಧ್ಯಾತ್ಮಿಕ ವನ್ನು 'ರಾಜಕೀಯ' ಎಂದಿದ್ದಾರೆ. ಪ್ರಜಾಪಾಲನೆಯನ್ನು 'ನೀಚಕೀಯ' ಎಂದಿದ್ದಾರೆ. ರಾಜಕೀಯವನ್ನು ನೀಚಕೀಯ ಗೌರವಿಸುತ್ತಿತ್ತು. ಅಂದರೆ ಪ್ರಜಾಪಾಲಕರು ಯೋಗಿಗಳನ್ನು ಗೌರವಿಸುತ್ತಿದ್ದರು. ರಾಜನಿಗಿಂತ ಸೇನಾಧಿಪತಿ ಕಡಿಮೆಯವನೆ ಆಗುವುದರಿಂದ ಕಡಿಮೆಯನ್ನು ನೀಚ ಎಂದು, ದೊಡ್ಡದನ್ನು ಉಚ್ಚ ಎಂದು ಹೇಳುವುದು ರೂಢಿಯಾಗಿರುವುದರಿಂದ ಆಧ್ಯಾತ್ಮಿಕದ ಪಕ್ಕದಲ್ಲಿ ಪ್ರಜಾಪಾಲನೆ ಕಡಿಮೆಯದಾಗುವುದರಿಂದ ಪ್ರಜಾಪಾಲನೆಯನ್ನು ನೀಚಕೀಯ ಎಂದೂ, ಆಧ್ಯಾತ್ಮಿಕವನ್ನು ರಾಜಕೀಯ ಎಂದೂ ಹೇಳಲಾಗಿದೆ. ಹಾಗೆ ಕರೆಯುವುದರಿಂದ ಪ್ರಜಾಪಾಲನೆ ಎಲ್ಲದಕ್ಕಿಂತ ನೀಚವಾದುದೆಂದು ತಿಳಿಯ ಬಾರದು. ಆಧ್ಯಾತ್ಮಿಕದ ಪಕ್ಕದಲ್ಲಿ ಆಧ್ಯಾತ್ಮಿಕಕ್ಕಿಂತ ನೀಚವಾದುದೆಂದು ಮಾತ್ರವೆ ಹೇಳುತ್ತಿದ್ದೇವೆ. ಪ್ರಜಾಪಾಲನೆ ಉಳಿದ ರಂಗಗಳೊಂದಿಗೆ ಹೋಲಿಸಿ ನೋಡಿದರೆ ಅವುಗಳಿಗಿಂತ ಉಚ್ಚವಾದುದೇ ಹೊರತು, ನೀಚವಾದುದು ಅಲ್ಲವೆಂದು ಹೇಳಬಹುದು. ಕಳ್ಳತನದಿಂದ ಪ್ರಜಾಪಾಲನೆ ವಿಧಾನವನ್ನು ಹೋಲಿಸಿ ನೋಡಿದರೆ ಕಳ್ಳತನ ನೀಚಕೀಯವಾದುದಾಗುತ್ತದೆ. ಹಾಗೆ ಉಳಿದ ಎಲ್ಲಾ ರಂಗಗಳ ಕಾರ್ಯ ಗಳು ಪ್ರಜಾಪಾಲನೆಯ ಪಕ್ಕದಲ್ಲಿ ನೀಚವಾಗಿಯೇ ಅಂದರೆ ಕಡಿಮೆಯಾಗಿಯೇ ಇರುತ್ತದೆ. ಆದ್ದರಿಂದ ಉಳಿದವುಗಳಿಗಿಂತ ಪಾಲನೆ ವಿಧಾನ ರಾಜಕೀಯವಾಗಿ ಇರುತ್ತದೆ.

ಈ ದಿನ ಭೂಮಿಮೇಲೆ ಆಧ್ಯಾತ್ಮಿಕ ಯಾವಮಾತ್ರ ಕಾಣಿಸದಂತೆ ಹೋಗಿರುವುದರಿಂದ, ಪ್ರಜಾಪಾಲನೆ ಹೆಚ್ಚಾಗಿ ಅದರಿಂದ, ಎಲ್ಲದಕ್ಕಿಂತ ದೊಡ್ಡದು ಪಾಲನಾ ವಿಧಾನವೇ ಎನ್ನುವಂತೆ, ಪಾಲನೆ ವಿಧಾನವನ್ನೇ ಈದಿನ ಎಲ್ಲರೂ 'ರಾಜಕೀಯ' ಎನ್ನುತ್ತಿದ್ದಾರೆ. ಈದಿನ ಆಧ್ಯಾತ್ಮಿಕ ಎಲ್ಲಿಯಾದರೂ ಅಪರೂಪವಾಗಿ ಇರುವಂತೆ ಕಾಣಿಸಿದರೂ ಅದು ಸರಿಯಾದ ಪದ್ಧತಿಯಿಂದ ಇಲ್ಲದಿರುವುದರಿಂದ, ಅದು ಬೆಲೆಯಿಲ್ಲದಾಗಿ ಹೋಗಿದೆ. ಎಲ್ಲಿಯಾದರೂ ಶಾಸ್ತ್ರಪದ್ಧತಿಯಲ್ಲಿ ಆಧ್ಯಾತ್ಮಿಕವಿದ್ದರೂ ಅದರ ಬೆಲೆಯನ್ನು ತಿಳಿಯದ ಮನುಜರಿರುವುದರಿಂದ,

ಅದನ್ನು ಯಾರೂ ದೊಡ್ಡದಾಗಿ ತಿಳಿಯದಿರುವುದರಿಂದ, ಎಲ್ಲರಿಗೂ ಪ್ರಜಾಪಾಲನೆ ಮೇಲೆ ದೃಷ್ಠಿ ಗೌರವವಿರುವುದರಿಂದ, ಈಗಿನಕಾಲದಲ್ಲಿ ಎಲ್ಲದಕ್ಕಿಂತ ದೊಡ್ಡದಾಗಿರುವ ಪ್ರಜಾಪಾಲನೆ ವಿಧಾನವೇ ರಾಜಕೀಯವಾಗಿ ಹೇಳಲಾಗುತ್ತದೆ. ಯಾವುದು ನಿಜವಾದರೂ ಸ್ವಲ್ಪಜನರ ದೃಷ್ಟಿಯಲ್ಲಿ ಆಧ್ಯಾತ್ಮಿಕ ಈದಿನಕ್ಕು ಗೌರವ ಪ್ರದವಾಗಿದೆ. ದೈವಜ್ಞಾನದ ಬೆಲೆ ತಿಳಿದವರು ಯಾರಾದರೂ, ಆಧ್ಯಾತ್ಮಿಕವನ್ನೇ ರಾಜಕೀಯವಾಗಿ ಹೇಳದೆ ತಪ್ಪುವುದಿಲ್ಲ. ಆದ್ದರಿಂದ ಅಷ್ಟೋ ಇಷ್ಟೋ ಜ್ಞಾನ ತಿಳಿದ ನಾವು ಪಾಲನಾ ವಿಧಾನಕ್ಕಿಂತ ಆಧ್ಯಾತ್ಮಿಕ ವಿಧಾನ ದೊಡ್ಡದೆಂದು ತಿಳಿದು, **ಆಧ್ಯಾತ್ಮಿಕವನ್ನೇ ರಾಜಕೀಯ** ಎನ್ನುತ್ತಿದ್ದೇವೆ. ಆಧ್ಯಾತ್ಮಿಕಕ್ಕಿಂತ ಪ್ರಜಾ ಪಾಲನಾ ವಿಧಾನ ಕಡಿಮೆಯದಾಗುವುದರಿಂದ ಅದನ್ನು **'ನೀಚಕೀಯ'** ಎಂದು ಕರೆಯುತ್ತಿದ್ದೇವೆ.

**ಪ್ರಶ್ನೆ :– ದೇಶದಲ್ಲಿ ಎಷ್ಟು ವಿದ್ಯೆಗಳು ಇವೆ? ಎಲ್ಲಾ ವಿದ್ಯೆಗಳಿಗಿಂತ ದೊಡ್ಡವಿದ್ಯೆ ಯಾವುದು?**

**ಉತ್ತರ:–** ಕೆಲವರು ಹಿರಿಯರು ಚತುಷ್ಷಷ್ಠಿ (64) ವಿದ್ಯೆಗಳು ಇವೆಯೆಂದು ಹೇಳುತ್ತಿರುತ್ತಾರೆ. ಇನ್ನು ಕೆಲವರು "ಕೂಳಿಗೋಸ್ಕರ ಕೋಟಿ ವಿದ್ಯೆಗಳು" ಎಂದು ಕೂಡಾ ಹೇಳುತ್ತಿದ್ದಾರೆ. ನಿಜಕ್ಕೆ ವಿದ್ಯೆಗಳು 64 ಮಾತ್ರವೇ ಇವೆಯೆಂದು ಒಂದು ವಿಧಾನದ ಪ್ರಕಾರ ಹೇಳಬಹುದು. 'ಕೂಳಿಗೋಸ್ಕರ ಕೋಟಿ ವಿದ್ಯೆಗಳು' ಎನ್ನುವಮಾತು ಸತ್ಯ ಅಲ್ಲದಿರಬಹುದು. ಕೂಳಿಗೋಸ್ಕರ ಕೋಟಿ ಕಾರ್ಯ ಗಳಿವೆ ಆದರೆ, ವಿದ್ಯೆಗಳು ಇಲ್ಲ. ಒಂದೇ ವಿದ್ಯೆಯನ್ನು ಕಲಿತವನು ಆ ವಿದ್ಯೆಯಲ್ಲಿ ಎಷ್ಟು ಕೆಲಸಗಳನ್ನಾದರೂ ಮಾಡಬಹುದು. ಉದಾಹರಣೆಗೆ ಚೋರವಿದ್ಯೆ ಕಲಿತವನು ಆ ವಿದ್ಯೆಯನ್ನು ತನ್ನ ಅವಶ್ಯಕ್ಕೆ ಎಷ್ಟು ವಿಧಗಳಾದ ಕಳ್ಳತನವಾದರೂ ಮಾಡಬಹುದು. ವಿವಿಧ ರೀತಿಯ ಕಳ್ಳತನಗಳು ಬೇರೆಬೇರೆ ಕಾರ್ಯಗಳಾಗಿರುತ್ತದೆ, ಆದ್ದರಿಂದ ಕಳ್ಳತನವೇ ಅನೇಕ ಕಾರ್ಯಗಳಾಗಿ ಕಾಣಿಸುತ್ತದೆ. ರಾತ್ರಿಸಮಯ ಮನೆಗೆ ಕನ್ನ ಹಾಕಿ ಕಳ್ಳತನ ಮಾಡುತ್ತಿದ್ದರು. ಅದು ಒಂದು ಕೆಲಸದಿಂದ ಕೂಡಿಕೊಂಡ ಕಳ್ಳತನವಾಗಿದ್ದು, ಮತ್ತೊಬ್ಬ ಕಳ್ಳ ಜೇಬುಕಳ್ಳತನವನ್ನು ಮಾಡುತ್ತಿದ್ದನು. ಜೇಬು ಕಳ್ಳತನ ಮನೆ ಕಳ್ಳತನಕ್ಕಿಂತ ಪ್ರತ್ಯೇಕತೆ ಹೊಂದಿರುವು

ದರಿಂದ ಆ ಕೆಲಸಕ್ಕಿಂತ ಈ ಕೆಲಸ ಹೆಸರುವಾಸಿಯಾಗಿದೆ. ಹೀಗೆ ಒಂದೇ ಕಳ್ಳವಿದ್ಯೆಯಲ್ಲಿ ಎಷ್ಟೋ ವಿಧಗಳ ಕಳ್ಳತನಗಳು ಎಷ್ಟೋ ವಿಧಗಳ ಕೆಲಸಗಳಿಂದ ಕೂಡಿಕೊಂಡಿರುವುದರಿಂದ ಒಂದೇ ವಿದ್ಯೆ ಎಷ್ಟೋ ಕೆಲಸಗಳಿಗೆ ಕಾರಣವಾಗುತ್ತಿದೆ. ಅದರಿಂದ ವಿದ್ಯೆಗಳು 64 ಮಾತ್ರವೇ ಇದ್ದರೂ ಅವುಗಳಿಗೆ ಸಂಬಂಧಿಸಿದ ಕಾರ್ಯಗಳು ಒಟ್ಟಾರೆ ಕೋಟಿ ಇರಬಹುದು. ಆದ್ದರಿಂದ ಕೂಳಿಗೋಸ್ಕರ ಕೋಟಿ ಕಾರ್ಯಗಳೆನ್ನುತ್ತೇವೆ. 64 ವಿದ್ಯೆಗಳು ಐದು ಶಾಸ್ತ್ರಗಳಿಗೆ ಸಂಬಂಧಿಸಿರುವವು ಮಾತ್ರವೆ ಇವೆ. ಆರನೇ ಶಾಸ್ತ್ರವಾದ ಬ್ರಹ್ಮವಿದ್ಯಾ ಶಾಸ್ತ್ರ ಎಲ್ಲಾ ಶಾಸ್ತ್ರಗಳಿಗಿಂತ ದೊಡ್ಡದು. 64 ವಿದ್ಯೆಗಳು ಕೋಟಿ ಕೆಲಸಗಳಾಗಿದ್ದರೂ ಬ್ರಹ್ಮ ವಿದ್ಯೆಯೊಂದರಲ್ಲಿ ಮಾತ್ರ ಮೂರು ವಿಧಗಳಾದ ಕೆಲಸಗಳು ಇವೆ. ಆ ಮೂರು ಕಾರ್ಯಗಳನ್ನು ಮೂರು ಯೋಗಗಳಾಗಿ ಹೇಳುತ್ತಿದ್ದೇವೆ. **ಕರ್ಮಯೋಗ, ಬ್ರಹ್ಮಯೋಗ, ಭಕ್ತಿಯೋಗ** ಎನ್ನುವ ಮೂರು ಯೋಗಗಳು ಮೂರು ಬೇರೆಬೇರೆ ಕ್ರಿಯೆಗಳಾಗಿವೆ. ಬ್ರಹ್ಮವಿದ್ಯೆ ಮೂರು ಕ್ರಿಯಾ ಯೋಗಗಳಾಗಿ ಆಚರಿಸಲ್ಪಡುತ್ತಿವೆ.

**ಪ್ರಶ್ನೆ:– ಪ್ರಸ್ತುತ ಭೂಮಿಮೇಲಿರುವ ಮನುಷ್ಯರಲ್ಲಿ ಹೆಚ್ಚಾಗಿ ಯಾವ ಕಾರ್ಯಗಳನ್ನು ಮಾಡುತ್ತಿದ್ದಾರೆ?**

**ಉತ್ತರ :–** ಈದಿನ ಭೂಮಿಮೇಲಿರುವ ಮನುಷ್ಯರಲ್ಲಿ ಐದು ಶಾಸ್ತ್ರಗಳಿಗೆ ಸಂಬಂಧಿಸಿದ 64 ವಿದ್ಯೆಗಳಲ್ಲಿಯೇ ಮುಳುಗಿ ತೇಲುತ್ತಿದ್ದಾರೆ. ಬ್ರಹ್ಮವಿದ್ಯೆಯನ್ನು ಯಾರಾದರೂ ಅನುಸರಿಸುತ್ತಿದ್ದಾರೆಂದು ತಿಳಿದರೂ, ಅಲ್ಲಿಗೆ ಹೋಗಿ ನೋಡಿದರೆ ಅವರು 'ಬ್ರಹ್ಮವಿದ್ಯೆ' ಎನ್ನುವ ಹೆಸರಿಟ್ಟು ಪ್ರಪಂಚ ವಿದ್ಯೆಗಳನ್ನೇ ಆಚರಿಸುತ್ತಿದ್ದಾರೆಂದು ತಿಳಿಯುತ್ತಿದೆ. ಈ ವಿಧವಾಗಿ ಒಟ್ಟಾರೆ ಮನುಷ್ಯರೆಲ್ಲರೂ ಪ್ರಪಂಚ ವಿದ್ಯೆಗಳನ್ನೆ ಅನುಸರಿಸುತ್ತಿದ್ದಾರೆ ಹೊರತು ಬ್ರಹ್ಮವಿದ್ಯೆಯನ್ನು ಯಾರೂ ಅನುಸರಿಸುತ್ತಿಲ್ಲ, ಬ್ರಹ್ಮವಿದ್ಯೆ ಎಂದರೆ ಏನೊ ತಿಳಿಯದ ಸ್ಥಿತಿಯಲ್ಲಿ ಮನುಷ್ಯರಿದ್ದಾರೆ. ನಾವು ಆಚರಿಸುವ 64 ವಿದ್ಯೆಗಳಿಗಿಂತ ಉತ್ತಮವಾದುದು, ದೊಡ್ಡದು, ಶಕ್ತಿವಂತವಾದುದು, ಎಲ್ಲದಕ್ಕಿಂತ ಬೇರೆಯಾದುದು, ಪ್ರತ್ಯೇಕವಾದ ಬ್ರಹ್ಮವಿದ್ಯೆ ಒಂದಿದೆಯೆಂದು, ಆ ವಿದ್ಯೆಯಲ್ಲಿ ಮೂರು ವಿಧಗಳ ಕಾರ್ಯಾ ಚರಣೆಗಳು ಇವೆಯೆಂದು, ಅವುಗಳನ್ನೇ ಕರ್ಮ, ಬ್ರಹ್ಮ, ಭಕ್ತಿಯೋಗ ಕ್ರಿಯೆಗಳೆಂದು

ಹೇಳುತ್ತಿದ್ದೇವೆನ್ನುವ ವಿಷಯವನ್ನು ಪ್ರಜೆಗಳು ಪೂರ್ತಿಯಾಗಿ ಮರೆತು ಹೋಗಿದ್ದಾರೆ. ಬ್ರಹ್ಮವಿದ್ಯೆಯನ್ನು ಪೂರ್ತಿಯಾಗಿ ತಿಳಿಯದ ಸ್ಥಿತಿಯಲ್ಲಿ ಮನುಷ್ಯರಿದ್ದಾರೆ.

**ಪ್ರಶ್ನೆ :– ಈದಿನ ಭೂಮಿಮೇಲೆ ಮನುಷ್ಯರಲ್ಲಿಯೇ ಕೆಲವರು ಪ್ರತ್ಯೇಕವಾದ ವ್ಯಕ್ತಿಗಳು ಹಂಸರೆಂದು, ಪರಮಹಂಸರೆಂದು, ಯೋಗಿಗಳೆಂದು, ಹಠ ಯೋಗಿಗಳೆಂದು, ಜ್ಞಾನಿಗಳೆಂದು, ಚೈತನ್ಯ ಜ್ಞಾನಿಗಳೆಂದು, ಮಹರ್ಷಿಗಳೆಂದು, ಸಿದ್ಧಿಗಳೆಂದು, ಗುರುಗಳೆಂದು, ಬೋಧಕರೆಂದು ಸ್ವಾಮಿಗಳೆಂದು, ಬಾಬಾಗ ಳೆಂದು ಅನೇಕ ವಿಧವಾದ ಹೆಸರುಗಳಿಂದ ಚಲಾವಣೆಯಾಗುತ್ತಿದ್ದಾರೆ. ಅವರೆಲ್ಲರೂ ದೈವಜ್ಞಾನದಲ್ಲಿ ನಿಪುಣರೆಂದು ಇಷ್ಟು ವಿಧಗಳ ಹೆಸರುಗಳಿಂದ ಹೇಳಲ್ಪಡುತ್ತಿದ್ದಾರೆ. ಅಂತಹವರನ್ನು ಉತ್ತಮ ವ್ಯಕ್ತಿಗಳಾಗಿ ಉಳಿದ ಪ್ರಜೆಗಳೆಲ್ಲರೂ ಗೌರವಿಸುತ್ತಿದ್ದಾರೆ. ಇಂತಹ ಸಮಯದಲ್ಲಿ ಬ್ರಹ್ಮವಿದ್ಯೆಯನ್ನು ತಿಳಿದವರು ಇಲ್ಲವೆಂದು ಹೇಳುವುದರಲ್ಲಿ ನಿಮ್ಮ ಉದ್ದೇಶವೇನು?**

**ಉತ್ತರ :–** ಈದಿನ ಭೂಮಿ ಮೇಲಿರುವ ಇಷ್ಟು ವಿಧಗಳ ಹೆಸರುಗಳಿಂದ ಕರೆಯುವವರಿರುವುದು ನಿಜವೇ! ಸಮಾನ್ಯ ಪ್ರಜೆಗಳು ಅವರನ್ನು ಗೌರವಿಸಿ ಅವರನ್ನು ದೊಡ್ಡದಾಗಿ ಹೊಗಳುವುದು ಕೂಡಾ ನಿಜವೇ! ಇದೆಲ್ಲವೂ ಒಂದು ಹಿಂದೂಮತದಲ್ಲಿಯೇ ಇದೆ. ಇಷ್ಟುಜನ ಗುರುಗಳು ಸ್ವಾಮೀಜೀಗಳಿರುವ ಸಮಾಜದಲ್ಲಿ ನಾವಿರುವುದಕ್ಕೆ ಚಿಕ್ಕವಯಸ್ಸಿನಲ್ಲಿ ನಾವು ಸಂತೋಷಿಸುತ್ತಿದ್ದೆವು. ನಂತರ ಕಾಲ ಕಳೆದಂತೆಲ್ಲ, ನಮ್ಮ ವಯಸ್ಸು ಬೆಳೆಯುತ್ತಾ ಬಂದೂ, ಬ್ರಹ್ಮವಿದ್ಯಾ ಶಾಸ್ತ್ರ ಪ್ರಕಾರವಾದರೆ ಎಲ್ಲರನ್ನು ಸೃಷ್ಟಿಸಿದ ದೇವರನ್ನು ಹೊರತು ಉಳಿದ ದೇವತೆಗಳನ್ನು ದೈವಜ್ಞಾನ ತಿಳಿದವರು ಯಾರೂ ಮುಗಿಯುವುದಿಲ್ಲವೆಂದು ತಿಳಿದಿದೆ. ಹಾಗಾದರೆ ಮೇಲೆ ಹೇಳಲಾದ ಜ್ಞಾನಿಗಳೆಲ್ಲರೂ ಯಾವುದೊ ಒಂದು ದೇವರನ್ನೊ, ದೇವತೆಯನ್ನೊ ಮುಗಿಯುವುದು ಅಸಲಾದ ದೇವರನ್ನು ನೆನೆಯದಿರುವುದು ನೋಡಿದರೆ, ಅವರ ಹೆಸರಿಗೆ ತಕ್ಕಷ್ಟು ಜ್ಞಾನ ಅವರಲ್ಲಿ ಇಲ್ಲವೆಂದು ತಿಳಿದುಹೋಗಿದೆ. ಆಗ ಅವರನ್ನು ನಾವು ದೈವಜ್ಞಾನವನ್ನು ತಿಳಿಸಿದ

ಜ್ಞಾನಿಗಳಾಗಿ ಅಲ್ಲದೆ ಸಾಧಾರಣ ಮನುಷ್ಯರನ್ನಾಗಿ ಗುರುತಿಸಲಾಗಿದೆ. **"ಅಸಲಾದ ದೇವರನ್ನಾಗಲಿ, ದೇವರ ಜ್ಞಾನವನ್ನಾಗಲಿ ಗುರುತಿಸಿದವನು ಇತರ ದೇವತೆಗಳನ್ನು ಮುಗಿಯುವುದಿಲ್ಲ."** ಎಂಬ ಒಂದೇ ಒಂದು ಸೂತ್ರವನ್ನು ಅನುಸರಿಸಿ ಅನೇಕ ಹೆಸರುಗಳಿಂದ ಚಲಾವಣೆ ಆಗುವವರೆಲ್ಲರೂ ನಿಜವಾದ ಬ್ರಹ್ಮವಿದ್ಯೆಯನ್ನು ತಿಳಿದವರು ಅಲ್ಲವೆಂದು ತಿಳಿದುಹೋಗಿದೆ. ಅವರೆಲ್ಲರೂ ದೊಡ್ಡ ವ್ಯಕ್ತಿಗಳಾಗಿ, ಗೌರವಿಸಲ್ಪಡುವ ಸ್ವಾಮಿಗಳಾಗಿ ಗುರುತಿಸಲ್ಪಟ್ಟರೂ, ನಿಜವಾಗಲೂ ಅವರಿಗೆ ಬ್ರಹ್ಮವಿದ್ಯೆ ತಿಳಿಯದಿರುವುದರಿಂದ ಅವರನ್ನು ಜ್ಞಾನಿಗಳಾಗಿ ಅವರನ್ನು ನಾವು ಗುರುತಿಸುತ್ತಿಲ್ಲ.

ಉದಾಹರಣೆಗೆ ಒಂದು ವಿಷಯವನ್ನು ಕುರಿತು ಹೇಳಿಕೊಂಡರೆ ಹೀಗೆ ಇದೆ. ಒಬ್ಬ ಸ್ವಾಮಿಜೀ ಎನಿಸಿಕೊಂಡ ದೊಡ್ಡ ವ್ಯಕ್ತಿ ಬ್ರಹ್ಮವಿದ್ಯೆಯನ್ನು ಚೆನ್ನಾಗಿ ತಿಳಿದವನಂತೆ ನಮಗೆ ಕಾಣಿಸುತ್ತಿದ್ದನು. ಆತನು ಬ್ರಹ್ಮವಿದ್ಯಾ ಶಾಸ್ತ್ರಕ್ಕೆ ಸಂಬಂಧಿಸಿದ ಎಷ್ಟೋ ಸೂತ್ರಗಳಿರುವ ಭಗವದ್ಗೀತೆಯನ್ನು ಉಪನ್ಯಾಸ ರೂಪದಲ್ಲಿ ಒಂದು ತಿಂಗಳಕಾಲ ಪ್ರಜೆಗಳಿಗೆ ಬೋಧಿಸಿದ್ದಾನೆ. ಎಷ್ಟೋ ಉತ್ತಮವಾಗಿ ತಿಂಗಳು ದಿನಗಳು ಭಗವದ್ಗೀತೆಯನ್ನು ಬೋಧಿಸಿದ ವ್ಯಕ್ತಿಯನ್ನು ತಪ್ಪದೆ ಬ್ರಹ್ಮವಿದ್ಯೆಯನ್ನು ತಿಳಿದವನಾಗಿ ಭಾವಿಸಿದ್ದೇವೆ. ಉಳಿದ ಪ್ರಜೆಗಳು ಸಹ ಹಾಗೆಯೇ ದೊಡ್ಡದಾಗಿ ಭಾವಿಸಿದ್ದಾರೆ. ಎಷ್ಟೋ ಜನರಿಗೆ ಮಹೋನ್ನತ ಜ್ಞಾನಿಯಾಗಿ ಕಾಣಿಸಿದ ವ್ಯಕ್ತಿಯನ್ನು ನಾವು ಸಹ ದೊಡ್ಡದಾಗಿ ತಿಳಿಯುತ್ತಿದ್ದೆವು. ಅಷ್ಟುದೊಡ್ಡ ಸ್ವಾಮಿಜೀ ಒಂದು ದಿನ ಉದಯವೇ ದೇವತಾಗುಡಿಗೆ ಹೋಗಿ ಆ ದೇವತೆಯನ್ನು ಪೂಜಿಸುವುದು, ದೇವತೆಯ ಹೆಸರು ಉಚ್ಛರಿಸುತ್ತಾ ಗುಡಿಯಸುತ್ತಾ ಪ್ರದಕ್ಷಣೆಗಳು ಮಾಡುವುದು ನಾವು ಪ್ರತ್ಯೇಕ್ಷವಾಗಿ ನೋಡಿದ್ದೇವೆ. ಆಗ ಆ ಸ್ವಾಮಿಜೀ ಪ್ರಜೆಗಳ ಲೆಕ್ಕದಲ್ಲಿ ಸ್ವಾಮೀಜೀಯಾದರೂ ನಮ್ಮ ಲೆಕ್ಕದಲ್ಲಿ ಆತನು ಸಾಧಾರಣ ಮನುಷ್ಯನಾಗಿಯೇ ಇರುವಂತೆ ತಿಳಿದಿದೆ. ಹೀಗೆ ಎಷ್ಟೋಜನ ದೊಡ್ಡ ಸ್ವಾಮಿಗಳು ಸಹಿತವು ಬ್ರಹ್ಮವಿದ್ಯೆಯನ್ನು ಸರಿಯಾಗಿ ಅರ್ಥ ಮಾಡಿಕೊಳ್ಳದೆ ಹೋಗಿದ್ದಾರೆಂದು ತಿಳಿಯುತ್ತಿದೆ. ಈ ವಿಧವಾಗಿ ದೊಡ್ಡ ಹೆಸರುಗಳು ಇಟ್ಟುಕೊಂಡವರೆಲ್ಲರೂ ನಿಜವಾದ ದೈವಜ್ಞಾನವನ್ನು ತಿಳಿಯದ ಸ್ಥಿತಿಯಲ್ಲಿ ಇದ್ದಾರೆಂದು, ಅವರು

ಮಾಡುವ ಪೂಜೆಗಳನ್ನನುಸರಿಸಿ ಅವರು ಅವರ ಹೆಸರಿಗೆ ತಕ್ಕಂತೆ ಇಲ್ಲವೆಂದು ಅರ್ಥವಾಗುತ್ತಿದೆ.

**ಪ್ರಶ್ನೆ :– ಸಮಾಜದಲ್ಲಿ ಸ್ವಾಮಿಜೀಗಳಾಗಿ ಹೆಸರುವಾಸಿಯಾದವರೆ ಸರಿಯಾದ ಮಾರ್ಗದಲ್ಲಿ ಇಲ್ಲದಂತೆ ನಿಮಗೆ ತಿಳಿದಿದೆ ಅಲ್ಲವೆ! ಹಾಗಿರುವಾಗ ಉಳಿದ ಪ್ರಜಾನಿಕ ದೈವಮಾರ್ಗವನ್ನು ಬಿಟ್ಟು ನಡೆಯುತ್ತಿದ್ದಾರೆಂದು ಹೇಳಬಹುದು ಅಲ್ಲವೆ! ದೈವಮಾರ್ಗವನ್ನು ಬಿಟ್ಟು ನಡೆಯುವವರು ತಮ್ಮ ದಾರಿ ಸರಿಯಾದುದು ಅಲ್ಲವೆಂಬ ಧ್ಯಾಸವಿಲ್ಲದಂತೆ ಹೋಗುತ್ತಿರುತ್ತಾರೆ. ಅಂತಹವರಿಗೆ ಜ್ಞಾನವನ್ನು ತಿಳಿಯುವಂತೆ ಮಾಡುವುದು ದೈವಕಾರ್ಯವಾಗುತ್ತದೆ. ಅದೇ ದೇವರಸೇವೆ ಕೂಡಾ ಆಗುತ್ತದೆ. ಜ್ಞಾನ ತಿಳಿಯದವರು ಅವರಿಗೆ ತಿಳಿದ ಪ್ರಪಂಚ ವಿದ್ಯೆಗಳಲ್ಲಿಯೇ ಕಾಲ ಕಳೆಯುತ್ತಾ, ಅವರು ಮಾಡುವ ಕೆಲಸಗಳನ್ನೇ ಉನ್ನತವಾದ ಕೆಲಸಗಳಾಗಿ ಭಾವಿಸುತ್ತಾರೆ. ಅಂತಹವರಿಗೆ ಸತ್ಯವನ್ನು ತಿಳಿಸಿ, ಅವರನ್ನು ದೈವಮಾರ್ಗದೊಳಗೆ ಕಳಿಸುವುದಕ್ಕೆ ನೀವು ಹೇಗೆ ಕೃಷಿ ಮಾಡುತ್ತೀರಾ?**

**ಉತ್ತರ :– ದೇವರನ್ನು ಪ್ರಾರ್ಥಿಸುವುದಕ್ಕಿಂತ, ದೇವರನ್ನು ಆರಾಧಿಸುವುದಕ್ಕಿಂತ ಉನ್ನತವಾದುದು ದೇವರ ಸೇವೆ.** ದೇವರ ಸೇವೆ ಎಂದರೆ! ದೇವರ ಜ್ಞಾನವನ್ನು ಇತರರಿಗೆ ತಿಳಿಸುವುದು. ದೇವರು ಕಾಣಿಸುವುದಿಲ್ಲ, ಆದ್ದರಿಂದ ಆತನ ಸೇವೆ ಜ್ಞಾನವನ್ನು ಪ್ರಚಾರ ಮಾಡುವುದರಿಂದಲೇ ನಡೆಯುತ್ತದೆ. ನಾನು ದೇವರ ಸೇವೆ ಮಾಡಬೇಕೆನ್ನುವುದು ನನ್ನ ಮುಖ್ಯ ಉದ್ದೇಶ. ನಾನು ದೇವರ ಸೇವೆ ಮಾಡುವುದರಿಂದ ಜ್ಞಾನ ತಿಳಿಯದವರಿಗೆ ಜ್ಞಾನವನ್ನು ತಿಳಿಸಿ ಸರಿಯಾದ ಮಾರ್ಗದೊಳಗೆ ತಂದಂತಾಗುತ್ತದೆ. ಆದುದರಿಂದ ನಾನು ಇತರರಿಗೆ ಜ್ಞಾನವನ್ನು ತಿಳಿಸುವ ಕಾರ್ಯವನ್ನೇ ಮಾಡಬೇಕೆಂದಿದ್ದೇನೆ. ಜ್ಞಾನವನ್ನು ಹೊರಗಿನ ಪ್ರಪಂಚದಲ್ಲಿನ ಪ್ರಜೆಗಳಿಗೆ ಎರಡು ವಿಧಗಳು ಹೇಳಬಹುದು. ಒಂದು ಹೇಳುವ ಬೋಧನೆಯಿಂದ, ಎರಡು ಬರೆಯುವ ಬರಹದಿಂದ ಸಮಾಚಾರವನ್ನು ಹೊರಗೆ ಕಳಿಸಬಹುದು. ಅದರಲ್ಲಿ ಹೇಳುವಬೋಧನೆ ತಾತ್ಕಾಲಿಕವಾಗುತ್ತದೆ. ಬರೆಯುವ ಗ್ರಂಥ ಶಾಶ್ವತವಾಗಿರುತ್ತದೆ. ಬೋಧನೆ, ಗ್ರಂಥ ಎರಡು ದೇವರ ಜ್ಞಾನವನ್ನು ತಿಳಿಸುವವೇ ಆದರೂ ಬೋಧನೆ ವೇಗವಾಗಿ, ಬೇಗನೆ ಮನುಷ್ಯರೊಳಗೆ ಹರಡುತ್ತದೆ. ಗ್ರಂಥರೂಪವಾದ ಬರಹ ನಿಧಾನವಾಗಿ ಪ್ರಜೆಗಳಿಗೆ ಸೇರಬಲ್ಲದು.

ಬೇಗನೆ ಹರಡುವ ಬೋಧನೆ, ನಿಧಾನವಾಗಿ ಸೇರುವ ಬರಹ ಎರಡರ ಮೂಲಕ ಪ್ರಜೆಗಳಿಗೆ ಜ್ಞಾನವನ್ನು ತಿಳಿಸಬೇಕೆಂದುಕೊಂಡಿದ್ದೇವೆ.

ನಾನಿರುವ ಶರೀರದಲ್ಲಿನ ಅಧಿಪತಿ (ಈಶ್ವರನು) ತನ್ನ ಶಕ್ತಿಯನ್ನು ಎರಡು ವಿಧಗಳಾಗಿ ಶರೀರದಲ್ಲಿ ಹರಡುವಂತೆ ಮಾಡುತ್ತಿದ್ದಾನೆ. ಶರೀರದೊಳಗೆ ಅಧಿಪತಿ ಒಬ್ಬನೇ ಇದ್ದಾನೆ. ಶರೀರಗಳಿಗೆಲ್ಲ ಅಧಿಪತಿ ಒಬ್ಬನೇ. ಆದರೆ ಶರೀರಗಳಿಗು, ಶರೀರಗಳಲ್ಲದ ಸಮಸ್ತ ಪ್ರಪಂಚಕ್ಕು ಅಧಿಪತಿ ದೇವರು ಒಬ್ಬನೇ ಇದ್ದಾನೆ. ದೇವರು ಸಮಸ್ತವನ್ನು ಸೃಷ್ಟಿಸಿದವನು. ಆತನೊಬ್ಬನನ್ನೇ 'ಸೃಷ್ಟಿಕರ್ತ' ಎಂದು ಕರೆಯುತ್ತೇವೆ. **ಶರೀರದೊಳಗಿರುವ ಅಧಿಪತಿ ದೇವರ ನಂತರ ದೇವರಾಗಿ, ಅಧಿಪತಿ ನಂತರ ಅಧಿಪತಿಯಾಗಿ, ಈಶ್ವರನ ನಂತರ ಈಶ್ವರನಾಗಿ ಹೇಳಲ್ಪಡುತ್ತಿದ್ದಾನೆ.** ಶರೀರದಲ್ಲಿನ ಈಶ್ವರನಾಗಿ, ಶರೀರದಲ್ಲಿರುವ ಅಧಿಕಾರಿಯಾಗಿ ಯಾವನಾದರೆ ಇದ್ದಾನೊ ಆತನನ್ನು **"ಆತ್ಮ"** ಎಂದು ಕರೆಯುತ್ತಿದ್ದೇವೆ. ಆತ್ಮ ಎಂದರೆ ತಿಳಿಯಲ್ಪಡದೆ ಅಡಗಿರುವುದೆಂದು ಅರ್ಥ. ಶರೀರದಲ್ಲಿ ಅಡಗಿಹೋಗಿ ಯಾರಿಗೂ ತಿಳಿಯದ ಆತ್ಮ ತನ್ನ ಶಕ್ತಿಯನ್ನು ಶರೀರದಲ್ಲಿ ಎರಡು ಮಾರ್ಗಗಳ ಮೂಲಕ ಪ್ರಸಾರಮಾಡುತ್ತಿದೆ. ಆತ್ಮಗೆ ಎರಡು ವಿಧಗಳ ಶಕ್ತಿಗಳು ಇವೆ. ಒಂದು ಕದಲಿಸುವ ಚೈತನ್ಯಶಕ್ತಿ, ಎರಡು ಯಾವಮಾತ್ರ ಕಾಣಿಸದಂತೆ ಪ್ರೇರೇಪಿಸುವ ಪ್ರೇರಣಾಶಕ್ತಿ.

ಶರೀರದಲ್ಲಿ ಈ ಎರಡು ಶಕ್ತಿಗಳು ಶರೀರವೆಲ್ಲಾ ಹರಡುವುದಕ್ಕೆ ತನ್ನ ಶರೀರದಲ್ಲಿಯೂ ಎರಡು ವ್ಯಾಪಕಗಳನ್ನು ದೇವರು ನಿರ್ಮಿಸಿದ್ದಾನೆ. ಶರೀರದ ಮೇಲಿರುವ ತಲೆಯಿಂದ ಶರೀರವೊಂದರ ಗುದಸ್ಥಾನದವರೆಗು, ಹರಡಿರುವ ದೊಡ್ಡ ನರ (ಬ್ರಹ್ಮನಾಡಿ) ಮೂಲಕ ಒಂದು ವ್ಯಾಪಕವನ್ನು, ಶರೀರದಲ್ಲಿಯೇ ಕಾಲು ಕೈಗಳನ್ನು ಬಿಟ್ಟು ಉಳಿದ ಶರೀರದಲ್ಲಿ ತಲೆಯಿಂದ ಕೆಳಗಿನವರೆಗು ಅಲ್ಲಲ್ಲಿ ನಿರ್ಮಿಸಿರುವ ಗ್ರಂಥಗಳು ಮತ್ತೊಂದು ವ್ಯಾಪಕವಾಗಿ ಇವೆ. ಎರಡು ವ್ಯಾಪಕಗಳ ಮೂಲಕ ಎರಡು ಶಕ್ತಿಗಳು ಶರೀರದಲ್ಲಿ ವ್ಯಾಪಿಸಿರುವವು. ಎರಡು ಶಕ್ತಿಗಳು ಒಂದೇ ಆತ್ಮವಾದರೂ ಒಂದೇ ಶಕ್ತಿ ಕದಲಿಕೆಗಳಿಂದ ಕೂಡಿಕೊಂಡ ಚೈತನ್ಯಶಕ್ತಿ. ಎರಡನೆಯದು ಕದಲಿಕೆಗಳಿಲ್ಲದ ಪ್ರೇರಣಾಶಕ್ತಿ. ಚೈತನ್ಯಶಕ್ತಿ ಬೆನ್ನುಮೂಳೆ ಯಲ್ಲಿನ ದೊಡ್ಡನರದಲ್ಲಿರುವ ಏಳು ನಾಡೀಕೇಂದ್ರಗಳ ಮೂಲಕ ಶರೀರದೊಳಗೆ

ಹರಡುತ್ತಿದೆ. ಹಾಗೆ ಶರೀರದಲ್ಲಿ ಅಲ್ಲಲ್ಲಿ ಇರುವ ಏಳು ಗ್ರಂಥಿಗಳಿಂದ ಪ್ರೇರಣಾಶಕ್ತಿ ಶರೀರದಲ್ಲಿ ಪ್ರವೇಶಿಸುತ್ತಿದೆ. ಇದೆಲ್ಲವೂ ಪ್ರತಿ ಮನುಷ್ಯನಲ್ಲಿ ನಡೆಯುತ್ತಿರುವ ವಿಧಾನ.

**ಪ್ರಶ್ನೆ:– ಮಧ್ಯದಲ್ಲಿ ಮಾತನಾಡುತ್ತಿರುವುದಕ್ಕೆ ಕ್ಷಮಿಸಿರಿ! ನಾನು ಕೇಳಿದ ಪ್ರಶ್ನೆ ಒಂದಾಗಿದ್ದು, ನೀವು ಹೇಳುವ ಉತ್ತರ ಮತ್ತೊಂದಾಗಿದೆ. ದಯಮಾಡಿ ನಾವು ಕೇಳಿದ ಪ್ರಶ್ನೆಗೆ ಉತ್ತರವನ್ನು ಹೇಳಿರಿ.**

**ಉತ್ತರ :–** ನೀನು ಕೇಳಿದ ಪ್ರಶ್ನೆಗೆ ಉತ್ತರ ಹೇಳುತ್ತಿದ್ದೇವೆ. ಉತ್ತರ ಅರ್ಥವಾಗ ಬೇಕೆಂದರೆ ಮೊದಲು ಹೇಳಬೇಕಾಗಿರುವುದನ್ನು ಹೇಳುತ್ತಿದ್ದೇನೆ. ಒಂದು ಸಿನಿಮಾಗೆ ಮೊದಲು ಆ ಸಿನಿಮಾ ಇವರಿಂದಲೇ ತಯಾರಾಗಿದೆಯೆಂದು ತಿಳಿಸುವ ವಿವರಣೆ ಬರಹದ ರೂಪದಲ್ಲಿ ಪ್ರದರ್ಶಿಸುತ್ತಾರೆ. ಹಾಗೆ ಊಟ ಮಾಡಬೇಕೆಂದರೆ ಮೊದಲು ಕಾಲು ಕೈಗಳು ತೊಳೆದುಕೊಳ್ಳಬೇಕು. ಹಾಗೆ ನಾನು ಪ್ರಜೆಗಳಿಗೆ ಜ್ಞಾನಸೇವೆ ಮಾಡಬೇಕೆಂದರೆ ಶರೀರದಿಂದಲೇ ಮಾಡಬೇಕು. ಶರೀರ ನನ್ನದು ಎಂದು ಮಾಡದೆ, ಶರೀರ ನನ್ನದಲ್ಲ ಎಂದು ಮೊದಲೆ ಹೇಳಿ, ಸೇವೆ ಮಾಡುವುದು ಮುಖ್ಯ. ಆದ್ದರಿಂದ ಉತ್ತರ ಹೇಳುವುದಕ್ಕಿಂತ ಮೊದಲು ಸ್ವಲ್ಪ ಪೀಠಿಕೆ ತಪ್ಪದೆ ಹೇಳಬೇಕಾಗಿ ಬಂದಿದೆ. ನಿನಗೆ ಇಷ್ಟವಿದ್ದು ಕೇಳಿದರೆ ಜ್ಞಾನ ಅರ್ಥವಾಗುತ್ತದೆ. ಒಂದುವೇಳೆ ಇಷ್ಟವಿಲ್ಲದೆ ಕೇಳದಿದ್ದರೆ ಜ್ಞಾನ ಅಪಾರ್ಥವಾಗಿ ನಿನಗೆ ಲಭಿಸುವುದಿಲ್ಲ.

ನಾವು ತಾತ್ಕಾಲಿಕವಾಗಿ ಹೇಳುವ ಜ್ಞಾನಬೋಧನೆಯು ಶರೀರದಲ್ಲಿನ ಏಳು ಚೈತನ್ಯ ಕೇಂದ್ರಗಳಿಂದ ಬರಬೇಕಾಗಿದ್ದೆ. ಹಾಗೆ ನಾವು ಬರೆಯುವ ಸಮಾಚಾರ ಜ್ಞಾನ ಏಳು ಗ್ರಂಥಿಗಳ ಮೂಲಕ ಪ್ರೇರಣೆಯಾಗಿ ಬರಬೇಕಾಗಿದ್ದೆ. ಈ ಎರಡು ವಿಧಾನಗಳು ನಿಮಗೆ ಮೊದಲೆ ತಿಳಿಯುವುದರಿಂದ ಕೇಳುವ ಬೋಧನೆಯ ಮೇಲೆ, ಓದುವ ಬರಹದ ಮೇಲೆ ಶ್ರದ್ಧೆ ತಪ್ಪದೆ ಬರುತ್ತದೆ. ಆದುದರಿಂದ ಈ ವಿಷಯವನ್ನು ಮೊದಲೆ ಹೇಳುತ್ತಿದ್ದೇವೆ. ಶರೀರದಲ್ಲಿ ಏಳು ನಾಡೀಕೇಂದ್ರಗಳ ಮೂಲಕ, ಏಳು ಗ್ರಂಥಿಗಳ ಮೂಲಕ ಶರೀರವೆಲ್ಲ ವ್ಯಾಪಿಸಿರುವ

ಆತ್ಮ ತನ್ನ ನಾಡೀಕೇಂದ್ರಗಳಿಂದ ಜ್ಞಾನವನ್ನು ಬೋಧನೆಯಾಗಿ ಹೇಳಿಸುತ್ತಾನೆ. ಹಾಗೆ ತನ್ನ ಗ್ರಂಥಿಗಳಿಂದ ಜ್ಞಾನವನ್ನು ಗ್ರಂಥವಾಗಿ ಬರೆಸುತ್ತಾನೆ. ಆತ್ಮ ಹೇಳಿಸಿರುವುದೆ ಬೋಧನೆ, ಆತ್ಮ ಬರೆಸಿರುವುದೆ ಗ್ರಂಥ. ಈದಿನ ನಾನು ಪ್ರಜೆಗಳಿಗೆ ಜ್ಞಾನವನ್ನು ಬೋಧನೆ ಮೂಲಕ, ಗ್ರಂಥಗಳ ಮೂಲಕ ಎರಡು ವಿಧಗಳಲ್ಲಿ ತಿಳಿಸಿ ದೇವರಸೇವೆ ಮಾಡಬೇಕೆಂದಿದ್ದೇನೆ. ಅದೇ ವಿಷಯವನ್ನು ತಿಳಿಸುವುದಕ್ಕೆ ಶರೀರದಲ್ಲಿರುವ ಒಳನಾಡಿಗಳನ್ನು ತಿಳಿಸಿದ್ದೇನೆ. ಮೊದಲು ಈ ವಿಷಯವನ್ನು ತಿಳಿಸುವುದರಿಂದ ಓದುವಾಗ **ಗ್ರಂಥಿಗಳ ಶಕ್ತಿ,** ಕೇಳುವಾಗ **ನಾಡೀಕೇಂದ್ರಗಳ ಶಕ್ತಿ** ಗುರುತಿಗೆ ಬರುತ್ತದೆ.

ವಿವರವಾಗಿ ತಿಳಿಯುವುದಕ್ಕೆ ಇನ್ನೊಂದು ವಿಷಯವನ್ನು ಹೇಳುತ್ತಿದ್ದೇನೆ ಕೇಳಿರಿ. ಪ್ರತಿ ಊರಿನಲ್ಲಿಯೂ ಪೋಸ್ಟಾಫೀಸು ಇರುವುದು ನಾವು ನೋಡಿರುತ್ತೇವೆ. ಸೆಲ್‌ಫೋನ್ ಬರದಪೂರ್ವದಲ್ಲಿ, ಸುಮಾರು 40 ವರ್ಷಗಳ ಕೆಳಗೆ ಪೋಸ್ಟಾಫೀಸು ಎಲ್ಲರಿಗೂ ಅತ್ಯವಶ್ಯಕವಾಗಿ ಇರುತ್ತಿತ್ತು. ಯಾವ ಸಮಾಚಾರವನ್ನಾದರೂ ಪೋಸ್ಟು ಮೂಲಕ ಕಳಿಸುತ್ತಿದ್ದೆವು. ಸೆಲ್‌ಫೋನ್‌ಗಳು ಬಂದ ನಂತರ ಪೋಸ್ಟಾಫೀಸು ಕೆಲಸ ಕಡಿಮೆಯಾಗಿದೆ. ಪೋಸ್ಟಾಫೀಸು ಎಂದರೆ ತಿಳಿಯದ ಸ್ಥಿತಿ ಏರ್ಪಟ್ಟಿದೆ. ಪೋಸ್ಟು ಆಫೀಸನ್ನು ಕನ್ನಡದಲ್ಲಿ ಟಪಾಲು, ಅಂಚೆ ಕಛೇರಿ ಎನ್ನುತ್ತಿದ್ದರು. ಇಂಗ್ಲೀಷು ಭಾಷೆಯಲ್ಲಿ ಪೋಸ್ಟು ಅಂಡ್ ಟೆಲಿಗ್ರಾಪ್ ಆಫೀಸು ಎಂದು ಕರೆಯುತ್ತಿದ್ದರು. ಅದನ್ನೇ ಪೋಸ್ಟನ್ನು 'ಅಂಚೆ (ಟಪಾಲು)' ಎಂದೂ, ಟೆಲಿಗ್ರಾಫ್ 'ತಂತಿ' ಎನ್ನುತ್ತಿದ್ದರು. ಬರಹ ರೂಪದಲ್ಲಿ ಬರೆಯುವ ಜಾಬುಗಳನ್ನು ಅಥವಾ ಉತ್ತರಗಳನ್ನು 'ತಪಾಲಾ' ಎಂದು ಕರೆಯುತ್ತಿದ್ದರು. ವೇಗವಾಗಿ ಸೇರುವ ಸಮಾಚಾರವಾದ ಟೆಲಿಗ್ರಾಪ್ ಅಥವಾ ಟೆಲಿಫೋನ್ ಸಮಾಚಾರವನ್ನು 'ತಂತಿ' ಎಂದೂ, ನಿಧಾನವಾಗಿ ಸೇರುವ ಸಮಾಚಾರವಾದ ಲೇಖ ರೂಪದಲ್ಲಿ (ಜಾಬಿನ ರೂಪದಲ್ಲಿ) ಬರೆಯಲಾದ ಸಮಾಚಾರವನ್ನು 'ಟಪಾಲಾ' (ಅಂಚೆ) ಎಂದೂ ಹೇಳುತ್ತಿದ್ದರು. ಹೊರಗಡೆ ಇಟ್ಟಿರುವ ಹೆಸರುಗಳು ಕೂಡಾ ಶರೀರದಲ್ಲಿರುವ ಜ್ಞಾನವನ್ನು ಅನುಸರಿಸಿ ಇಟ್ಟಿರುವವೆಂದು ತಿಳಿಯುತ್ತಿದೆ. ವೇಗವಾಗಿ ಸಮಾಚಾರ ಮಾತುಗಳ ರೂಪದಲ್ಲಿ ಹೊರಗೆ ಬರಬಲ್ಲದೆಂದು ಹೇಳಿದ್ದೇವೆ. ವೇಗವಾಗಿ

ಬರುವ ಸಮಾಚಾರ ಶರೀರದಲ್ಲಿನ ಉದ್ದವಾದ ನಾಡಿಗಳ ಮೂಲಕ, ಅದರಲ್ಲಿನ ಕೇಂದ್ರಗಳ ಮೂಲಕ ಹೊರಗೆ ಬರುತ್ತಿದೆ. ಹೊರಗು ಸಹ ಉದ್ದವಾದ ತಂತಿಯ ಮೂಲಕ ಬರುವ ಸಮಾಚಾರವನ್ನು 'ತಂತಿ' ಎಂದಿದ್ದಾರೆ. ಶರೀರದಲ್ಲಿನ ನಾಡಿ ಅಥವಾ ನರವು ಕೂಡ ತಂತಿಯಂತಿರುತ್ತದೆ. ಶರೀರದಲ್ಲಿನ ಸಮಾಚಾರ ವೇಗವಾಗಿ ಹೊರಗೆ ಬರುತ್ತಿದೆಯೆಂಬ ನಮೂನೆಯನ್ನು ತಿಳಿಸುವುದಕ್ಕಾಗಿ ಟೆಲಿಗ್ರಾಪ್ ಅಥವಾ ಟೆಲಿಫೋನ್ ಸಮಾಚಾರ ತಂತಿಮೂಲಕ ಬರುವಂತೆ ದೇವರು ನಿರ್ಮಿಸಿದ್ದಾನೆಂದು ಅರ್ಥವಾಗುತ್ತಿದೆ.

ಒಂದು ಊರಿನಲ್ಲಿ ತಂತಿ, (ಅಂಚೆ) ಕಛೇರಿ ಇರುವಂತೆ, ಶರೀರ ದಲ್ಲಿಯೇ ತಂತಿ ಮತ್ತು ಅಂಚೆ ಕಛೇರಿ ಇದೆಯೆಂದು ಹೇಳಬಹುದು. ತಂತಿ ಕಛೇರಿ ನರಗಳ ವ್ಯವಸ್ಥೆ, ಅಂಚೆ ಕಛೇರಿ ಗ್ರಂಥಗಳ ವ್ಯವಸ್ಥೆ ಎರಡೂ ಶರೀರದಲ್ಲಿಯೇ ಇವೆಯೆಂದು ತಿಳಿಯುತ್ತಿದೆ. ನಾನಿರುವ ಶರೀರದಲ್ಲಿ ತಂತಿ ಅಂಚೆ ಕಛೇರಿ ಎಲ್ಲದಕ್ಕಿಂತ ದೊಡ್ಡದಾಗಿದೆ. ನಾನು ಪೋಸ್ಟುಮ್ಯಾನಾಗಿ ಕೆಲಸಮಾಡುತ್ತಾ ನಿಮಗೆ ಬಂದಿರುವ ಅಂಚೆ ಮತ್ತು ತಂತಿ (ಪೋಸ್ಟು ಮತ್ತು ಟೆಲಿಗ್ರಾಮ್) ಸಮಾಚಾರವನ್ನು ನೀಡುತ್ತಿದ್ದೇವೆ. ಯಾವ ಜಾಬನ್ನಾಗಲಿ, ಯಾವ ಉತ್ತರವನ್ನಾಗಲಿ ಪೋಸ್ಟುಮ್ಯಾನ್ ಬರೆಯುವುದಿಲ್ಲ. **"ಪೋಸ್ಟುಮ್ಯಾನ್"** ಬಂದಿರುವ ಸಮಾಚಾರವನ್ನು ನೀಡುವ ಮಧ್ಯವರ್ತಿ ಮಾತ್ರವೆ. ಹಾಗೆ ನಾನು ಹೇಳುವ ಬೋಧನೆಯಾದರೂ, ಬರೆಯುವ ಬರಹವಾದರೂ ನನ್ನದಲ್ಲ, ತಂತಿ, ಅಂಚೆ (ನಾಡಿಗಳಿಂದ, ಗ್ರಂಥಿಗಳಿಂದ) ಬರುವಂತಹ ಸಮಾಚಾರವೇಯೆಂದು ತಿಳಿಯಬೇಕು. ಈಗ ನನ್ನಿಂದ ನಿಮಗೆ ಬರುವ ಯಾವ ಸಮಾಚಾರ ನನ್ನದು ಅಲ್ಲವೆಂದು, ಅದು ನನ್ನ ಶರೀರದಲ್ಲಿನ ತಂತಿ, ಅಂಚೆಕಛೇರಿಯಿಂದ ಬಂದಿರುವು ದೆಂದು ನೀವೂ ಸಹ ತಿಳಿಯಬಲ್ಲರು.

ನಾನು ನನ್ನ ಕಛೇರಿಯಿಂದ ಬರುವ (ನನ್ನ ಶರೀರದಲ್ಲಿನ ಆತ್ಮದಿಂದ ಬರುವ) ಸಮಾಚಾರವನ್ನು ಮಾತ್ರ ಎರಡು ವಿಧಗಳಾಗಿ ತಿಳಿಸುತ್ತಿದ್ದೇನೆ. ನಾನು ನೀಡುವ ಸಮಾಚಾರ ಪೋಸ್ಟು (ಗ್ರಂಥ ರೂಪವಾಗಿ) ಮತ್ತು ಟೆಲಿಗ್ರಾಮ್ (ಮಾತಿನ ರೂಪವಾಗಿ) ಇರುತ್ತದೆ. ಈ ಎರಡು ರೂಪಗಳಲ್ಲಿ ಪ್ರಜೆಗಳಿಗೆ

ಜ್ಞಾನ ಸಮಾಚಾರವನ್ನು ತಿಳಿಸಿ ಅವರನ್ನು ಜ್ಞಾನಿಗಳನ್ನಾಗಿ ಮಾರ್ಪಡಿಸುತ್ತಾ, ದೇವರಸೇವೆ ಮಾಡಬೇಕೆಂದು ಅಂದರೆ ಪೋಸ್ಟಮ್ಯಾನ್ ಉದ್ಯೋಗವನ್ನು ಮಾಡಬೇಕೆಂದು ಕೊಂಡಿದ್ದೇನೆ. ಪ್ರತಿ ತಿಂಗಳಲ್ಲಿರುವ ಪೌರ್ಣಮಿ ದಿನದಂದು ಬರುವ ತಂತಿಯನ್ನು ಅಂದರೆ ಮಾತುಗಳ ರೂಪದಲ್ಲಿ ಬರುವ ಸಮಾಚಾರವನ್ನು ಪ್ರಜೆಗಳಿಗೆ ಉಪನ್ಯಾಸ ರೂಪದಲ್ಲಿ ತಿಳಿಸುತ್ತಿದ್ದೇನೆ. ಹಾಗೆ ಕೆಲವು ತಿಂಗಳಿಗೊಂದುಸಲ ಅಂಚೆ (ಗ್ರಂಥಗಳ) ರೂಪದಲ್ಲಿ ಜ್ಞಾನವನ್ನು ತಿಳಿಸುತ್ತಿದ್ದೇನೆ. ಈ ವಿಧವಾಗಿ ನಮ್ಮ ಹತ್ತಿರಕ್ಕೆ ಬರುವವರಿಗೆ ಮಾತ್ರವೆ, ನಾವು ಹತ್ತಿರದಲ್ಲಿಯೇ ಇರುವವರಿಗೆ ಮಾತ್ರವೆ, ಸಮಾಚಾರವನ್ನು ತಿಳಿಸುತ್ತಿದ್ದೇವೆಂಬ ಮಾತು ಬರದಂತೆ, ಎಲ್ಲಾ ರಂಗಗಳಲ್ಲಿ ಕೆಲಸಮಾಡುತ್ತಿರುವ ಎಲ್ಲರಿಗೂ ನಾವು ಪ್ರತ್ಯೇಕವಾಗಿ ಲೇಖ ಬರೆದು ಅವರನ್ನು ಜಾಗೃತ ಪಡಿಸುವಂತೆ ಪ್ರಯತ್ನ ಮಾಡಬೇಕೆಂದುಕೊಂಡಿದ್ದೇವೆ. ಆ ಪ್ರಯತ್ನದಲ್ಲಿನ ಭಾಗವಾಗಿ ಎಲ್ಲರಿಗೂ ಅಂಚೆ ರೂಪದಲ್ಲಿ ಸಮಾಚಾರವನ್ನು ಕಳಿಸುತ್ತಿದ್ದೇವೆ.

ಬರಹರೂಪದಲ್ಲಿ ಬರೆಯುವ ಬರಹವನ್ನು 'ಲೇಖ' ಎನ್ನುತ್ತೇವೆ. ಎಲ್ಲಾ ರಂಗಗಳಲ್ಲಿ ಕೆಲಸಮಾಡುವ ಎಲ್ಲರಿಗೂ ಲೇಖಗಳನ್ನು ಬರೆದಿದ್ದೇವೆ. ಮನುಷ್ಯರು ಅದು, ಇದು ಎನ್ನದಂತೆ 64 ವಿದ್ಯೆಗಳಲ್ಲಿನ ಕೋಟ್ಯಾದಿ ಕೋಟಿಗಳು ಕೆಲಸಗಳು ಮಾಡುವ ಎಲ್ಲರಿಗೂ ಜ್ಞಾನ ಸಮಾಚಾರವಿರುವಂತೆ ಮಾಡಬೇಕೆಂದು ಕೊಂಡು ಕಾರ್ಮಿಕರಿಗು, ಕರ್ಷಕರಿ (ರೈತರಿ)ಗು, ಬೋಧಕರಿಗು, ಗುರುಗಳಿಗು, ವ್ಯಾಪಾರಿಗಳಿಗು, ಉದ್ಯೋಗಸ್ತರಿಗು, ಪೋಲೀಸರಿಗು, ಕಳ್ಳರಿಗು, ಆಫೀಸರ್‌ಗಳಿಗು, ಗುಮಸ್ತರಿಗು, ತಿಳುವಳಿಕೆಯುಳ್ಳವರಿಗು, ತಿಳುವಳಿಕೆ ಇಲ್ಲದವರಿಗು, ಸಂಸಾರಿಗು, ವ್ಯಭಿಚಾರಿಗು, ಧನಿಕನಿಗು, ಬಡವನಿಗು, ರಾಜಕೀಯದಲ್ಲಿರುವವನಿಗು, ನೀಚಕೀಯದಲ್ಲಿರುವವನಿಗು, ಮಂತ್ರಿಗು, ರಾಜನಿಗು, ಅಧಿಕಾರದ ಘನತೆ ಇರುವವರಿಗು, ಯಾವ ಗೌರವ ಇಲ್ಲದವನಿಗು, ಮಾಯಕನಿಗು, ಗುತ್ರ ಇರುವವನಿಗು, ಸಮಸ್ತ ಮಾನವರಿಗು ತಿಳಿಯುವಂತೆ ತಪಾಲಾ ಮೂಲಕ ಬರುವ ಸಮಾಚಾರವನ್ನು ಎಂದರೆ ಲೇಖ ರೂಪದಲ್ಲಿ ಸಮಾಚಾರವನ್ನು ತಿಳಿಸುತ್ತೇನೆ. ಒಬ್ಬ ರಾಜಕೀಯ ನಾಯಕನಿಗೆ ನನ್ನಿಂದ ಒಂದು ಉತ್ತರ

ಬಂದಿದೆಯೆಂದರೆ ಆ ಸಮಾಚಾರವನ್ನು ಆತನಿಗೊಬ್ಬನಿಗಲ್ಲದೆ ಉಳಿದ ರಾಜಕೀಯನಾಯಕರೆಲ್ಲರಿಗೂ ಎಂದು ತಿಳಿಯಬೇಕಾಗಿರುತ್ತದೆ. ಹಾಗೆ ಕರ್ಷಕನಿಗೆ (ರೈತನಿಗೆ) ನಾವು ಲೇಖ ಬರೆದರೆ, ಅದು ಕರ್ಷಕರೆಲ್ಲರಿಗೂ ಹೇಳಿದ ಸಮಾಚಾರವಾಗಿ ತಿಳಿಯಬೇಕು. ಇದೇ ವಿಧವಾಗಿ ಒಬ್ಬ ಕಾರ್ಮಿಕನಿಗೆ ಲೇಖ ಬರೆದರೆ ಅದು ಕಾರ್ಮಿಕರೆಲ್ಲರಿಗೂ ಅನ್ವಯಿಸುತ್ತದೆಂದು ತಿಳಿಯಬೇಕು.

ಲಿಪಿಯಿಂದ ಲಿಖಿಸಲ್ಪಟ್ಟ ಲೇಖ ಎಲ್ಲರದು ಜಾಬು ಆದರೂ, ನನ್ನದು ಮಾತ್ರ ಉತ್ತರವಾಗಿ ಇರಬೇಕೆಂದು ಶರೀರದಲ್ಲಿನ ಅಧಿಪತಿ (ಈಶ್ವರ) ಯಾದ ಆತ್ಮವನ್ನು ಕೋರುತ್ತಾ ಜೀವಾತ್ಮನಾದ ನನ್ನ ಭಾವನೆಯಿಂದ ಆತ್ಮವನ್ನು ಲೇಖ ಬರೆಯಿರೆಂದು ಕೋರುತ್ತಿದ್ದೇನೆ. ಬರೆಯುವುದು ಆತ್ಮವೇ, ಜೀವಾತ್ಮನಾದ ನಾನು ಬರೆಯಲಾರೆನು. ಆದರೆ ನನ್ನ ಭಾವನೆಯಿಂದ ಆತ್ಮ ಬರೆದರೂ ಅಥವಾ ಮಾಡಿದರೂ ಅದು ನಾನು ಬರೆದಂತೆ, ನಾನು ಮಾಡಿದಂತೆಯಾಗುತ್ತದೆ. ಆಗ ನಾನು ದೇವರಸೇವೆ ಮಾಡಿದಂತಾಗುತ್ತದೆ. ಆದ್ದರಿಂದ ಇಲ್ಲಿ ಆತ್ಮ ಕೆಲಸ ಮಾಡುತ್ತಿದ್ದರೂ, ನನ್ನೊಂದರ ಅಹಂಭಾವನೆ ಇರುವುದರಿಂದ ಈ ಕೆಲಸವನ್ನು ನಾನು ಮಾಡಿದಂತೆ ಆಗುತ್ತದೆ. ಆ ಸೇವಾ ಫಲಿತ ನನಗೆ ದಕ್ಕುತ್ತದೆ. ಇಲ್ಲಿ ದೈವಸೇವೆಗಾಗಿ ಲೇಖವನ್ನು ಉತ್ತರವಾಗಿ ಬರೆಯುತ್ತಿದ್ದೇನೆ. ಮೊದಲು ಲೇಖ ಮನುಷ್ಯರಲ್ಲಿ ಹೆಚ್ಚಾಗಿ ಬಡವನಾದ ದರಿದ್ರನಿಗೆ ಬರೆಯುತ್ತಿದ್ದೇವೆ. ಬಡವನನ್ನು 'ದರಿದ್ರನು' ಎನ್ನುವುದು ನಡೆಯುತ್ತಿದೆ. ಆದ್ದರಿಂದ ನಾನು ಮೊದಲು ದರಿದ್ರನಿಗೆ ಉತ್ತರ ರೂಪದಲ್ಲಿ ಲೇಖವನ್ನು ಬರೆಯಬೇಕೆಂದಿದ್ದೇನೆ.

**ಪ್ರಶ್ನೆ :– ಬಡವನನ್ನು ಬಡವ ಎಂದರೆ ಸರಿಹೋಗುತ್ತದೆ ಅಲ್ಲವೆ! ದರಿದ್ರನು ಎಂದು ಹೇಳನ ಮಾಡಿದಂತೆ ಏಕೆ ಹೇಳಬೇಕು? ಜ್ಞಾನ ತಿಳಿದ ನೀವೇ ಕಡುಬಡವರನ್ನು ದರಿದ್ರನು ಎಂದು ನೀಚವಾಗಿ ಉಚ್ಚರಿಸದೆ ನಿರ್ಭಾಗ್ಯನು ಎಂದಾಗಲಿ ಕಡುಬಡವ ಎಂದಾಗಲಿ ಹೇಳಬಹುದು ಅಲ್ಲವೆ!**

**ಉತ್ತರ :–** ನೀವು ಈ ಮಾತನ್ನು ಕೇಳಬೇಕೆಂದು ನಾನು ಬಡವನು 'ದರಿದ್ರನು' ಎಂದು ಹೇಳಿದ್ದೇನೆ. ಏನನ್ನಾದರೂ ಸಂದರ್ಭವಿಲ್ಲದೆ ಹೇಳಲಾರೆವು ಅಲ್ಲವೆ!

ಈಗ ನೀನು ಕೇಳಿದ್ದೀಯಾ, ಆದ್ದರಿಂದ ನಾನು ಹೇಳುವುದಕ್ಕೆ ಸಂದರ್ಭ ದೊರೆತಿದೆ. ಇದು ನಿನಗೆ ಹೇಳುವ ಉತ್ತರ ಎಂದು ಅಂದುಕೊಳ್ಳದೆ, ಧನವಂತನು ಎಂದರೆ ಧನ (ಹಣ) ಇರುವವನು ಎಂದು ಅರ್ಥ. ಹಾಗೆಯೇ ಭಗವಂತನು ಎಂದರೆ ಭಗವು ಇರುವವನು ಎಂದು ಹೇಳಲಾರೆವು. ಅಲ್ಲಿ ಭಗದಿಂದ ಹುಟ್ಟಿದವನು ಎಂದು ಹೇಳಬೇಕು. ಹಿಂದಿಭಾಷೆಯಲ್ಲಿ ದವಾಖಾನಾ ಎಂದರೆ ಔಷಧಗಳು ತಿನಿಸುವ ವೈದ್ಯಶಾಲೆ ಎಂದು ಅರ್ಥ. ಹಾಗೆ ಪಾಯಖಾನಾ ಎಂದರೆ ಇಲ್ಲಿಯೂ ಸಹ ಏನೊ ತಿನಿಸುವುದೆಂದು ಅಂದುಕೊಳ್ಳಬಾರದು. ಮಲವಿಸರ್ಜನಶಾಲೆ ಅಥವಾ ಶೌಚಾಲಯ ಎಂದುಕೊಳ್ಳಬೇಕು. ಈ ವಿಧವಾಗಿ ಸಮಯವನ್ನು ಅನುಸರಿಸಿ ಸಂದರ್ಭವನ್ನು ಅನುಸರಿಸಿ, ವ್ಯಕ್ತಪಡಿಸುವ ಸ್ಥಳವನ್ನು ಅನುಸರಿಸಿ, ವ್ಯಕ್ತಿಗಳನ್ನು ಅನುಸರಿಸಿ ಪದಗಳಿಗೆ ಅರ್ಥಗಳು ಬದಲಾಗುತ್ತಿರುತ್ತವೆ. ಈಗ ನಾನು 'ದರಿದ್ರನು' ಎಂಬ ಪದವನ್ನು ಹೇಳಿದ ತಕ್ಷಣ ಆ ಪದವನ್ನು ನೀಚವಾಗಿ, ಹೇಳನವಾಗಿ ಹೇಳಿದಂತೆ ನೀವು ತಿಳಿದುಕೊಂಡಿದ್ದೀರ. ಈಗ ಹಾಗೆ ಅಂದುಕೊಳ್ಳುವ ಸಂದರ್ಭವೇ ಅಲ್ಲವೆಂದು ತಿಳಿಸುತ್ತಿದ್ದೇವೆ. ನಾನು ಮೊದಲೆ ನನ್ನ ಮೂಲಕ ಬರುವ ಸಮಾಚಾರವೆಲ್ಲವೂ ಉತ್ತರವಾಗಿ ಇರಬೇಕೆಂದು ಆತ್ಮವನ್ನು ಬೇಡಿಕೊಂಡಿದ್ದೇನೆ. ಆದ್ದರಿಂದ ನಿಮ್ಮನ್ನು **"ದೇವರ ದಾರಿದಾಪುಗಳಿಗು"** ತೆಗೆದುಕೊಂಡು ಹೋಗುವಂತೆ ಮಾತನಾಡಬೇಕೆಂದು ತಿಳಿಕೊಂಡಿದ್ದೇನೆ. ಆದ್ದರಿಂದ ನಾನು **'ದರಿದ್ರನು'** ಎನ್ನುವ ಪದವನ್ನು ಬಳಸುವುದು ನಡೆದಿದೆ. ತಕ್ಷಣ ಅದನ್ನು ಕುರಿತು ನೀನು ಪ್ರಶ್ನಿಸುವುದಾಗಿದೆ. ಆ ಮಾತಿನೊಂದರ ವಿಧಾನವನ್ನು ಕುರಿತು ಈಗ ಹೇಳಿಕೊಳ್ಳೋಣ.

'ದರಿ' ಎಂದರೆ ದಡ ಎಂದು ಅರ್ಥ. 'ದಾಪು' ಎಂದರೆ ಹತ್ತಿರ ಎಂದು ಅರ್ಥ. 'ದರಿದಾಪು' ಎಂದರೆ ದಡಕ್ಕೆ ಹತ್ತಿರವಾಗಿ ಎಂದು ಅರ್ಥ. ದೇವರ ದರಿದಾಪಿಗೆ ಎಂದರೆ ದೇವರ ಸಮೀಪಕ್ಕೆ ಎನ್ನುವ ಭಾವನೆ. ಅದೇ ವಿಧವಾಗಿ ದರಿ ಎನ್ನುವ ಪದವನ್ನು ಉಪಯೋಗಿಸಿ ದರಿದ್ರನು ಎಂದು ಹೇಳಿದ್ದೇವೆ. **'ದರಿದ್ರನು' ಎಂದರೆ 'ದೇವರ ಜ್ಞಾನ ಎಂಬ ಗಟ್ಟಿಗೆ ಹತ್ತಿರವಾಗಿರುವವನು'** ಎಂದು ಅರ್ಥ. 'ದ್ರನು' ಎಂದರೆ ದೃಢವಾಗಿ ಇರುವವನೆಂದು ಅರ್ಥ.

ಗಟ್ಟು ಹತ್ತಿರ ಗಟ್ಟಿಯಾಗಿರುವವನನ್ನು ದರಿದ್ರನು ಎಂದು ಹೇಳಬಹುದು. ಧನ ಹೊಂದಿರುವವನನ್ನು ಧನವಂತನು ಎನ್ನಬಹುದು. ಧನ ಎಂದರೆ ಇಲ್ಲಿ ಪ್ರಪಂಚ ಧನವೆಂದು ಅರ್ಥ. ಪ್ರಪಂಚ ಧನ ಹೊಂದಿರುವವನಿಗೆ ದೈವಜ್ಞಾನ ಬಹಳ ದೂರವಾಗಿರುತ್ತದೆಂದು ಹೇಳಬಹುದು. ಈ ವಿಷಯವನ್ನು ಮಧ್ಯ ದೈವಗ್ರಂಥದಲ್ಲಿ ಹೀಗೆ ಹೇಳಿದ್ದಾರೆ. **(ಮತ್ತಾಯ ಸುವಾರ್ತೆ, 19–23,24) "ಧನವಂತನು ಪರಲೋಕ ರಾಜ್ಯದಲ್ಲಿ ಪ್ರವೇಸುವುದು ದುರ್ಲಭವೆಂದು ನಿಮ್ಮೊಂದಿಗೆ ನಿಶ್ಚಯವಾಗಿ ಹೇಳುತ್ತಿದ್ದೇವೆ. ಧನವಂತನು ಪರಲೋಕ ರಾಜ್ಯದಲ್ಲಿ ಪ್ರವೇಶಿಸುವುದಕ್ಕಿಂತ ಸೂಜಿರಂಧ್ರದಲ್ಲಿ ಒಂಟೆ ತೂರುವುದು ಸುಲಭವೆಂದು ಹೇಳುತ್ತಿದ್ದೇವೆ"**. ಧನವಿರುವವರು ಸಹಜವಾಗಿ ದೇವರ ಜ್ಞಾನಕ್ಕೆ ದೂರವಾಗಿರುತ್ತಾರೆ. ಸರ್ವವು ಧನದಿಂದಲೇ ನಡೆಯುತ್ತದೆನ್ನುವ ನಂಬಿಕೆಯಿಂದ ಅವರಿರುತ್ತಾರೆ. ಧನ ಇರುವವರು ಅಪರೂಪವಾಗಿ ದೇವರ ಜ್ಞಾನದ ಮೇಲೆ ಆಸಕ್ತಿ ಹೊಂದಿರುತ್ತಾರೆ.

ಬಡವನ ವಿಷಯಕ್ಕೆ ಬಂದು ನೋಡಿದರೆ ಅವನಿಗೆ ಎಲ್ಲಾ ಕಷ್ಟಗಳೇ ಉಂಟಾಗುತ್ತಿರುವುದರಿಂದ ಅವನಿಗೆ ಬೇಗನೆ ದೈವಜ್ಞಾನ ಅರ್ಥವಾಗುತ್ತದೆ. ಮನುಷ್ಯನಿಗೆ ಬಾಧೆಗಳಲ್ಲಿಯೇ ದೇವರು, ದೇವರ ಜ್ಞಾನ ಜ್ಞಾಪಕ ಬರುತ್ತದೆ. ಆದ್ದರಿಂದ ಬಡವನಿಗೆ ಇತರ ಪ್ರಪಂಚ ವಿಷಯಗಳ ಮೇಲಿನ ಗಮನಕ್ಕಿಂತ ದೇವರ ಜ್ಞಾನದ ಮೇಲೆ ಗಮನ (ಧ್ಯಾಸ) ಹೆಚ್ಚಾಗುತ್ತದೆ. ಪ್ರಪಂಚ ಸುಖಗಳು, ಪ್ರಪಂಚ ವಿಷಯಗಳು ಧನದಿಂದ ಸಾಧ್ಯವೆಂದು ತಿಳಿದ ಬಡವನಿಗೆ ಅವನ ಹತ್ತಿರ ಹಣವಿಲ್ಲ ಆದುದರಿಂದ, ಅವನ ಧ್ಯಾಸ(ಗಮನ) ಪ್ರಪಂಚ ವಿಷಯಗಳ ಮೇಲೆ ಹೋಗಲಿಲ್ಲ. ಹಣ ಇಲ್ಲದಿದ್ದರೂ ದೊರೆಯುವ ಜ್ಞಾನದ ಮೇಲೆ ಅವನ ಧ್ಯಾಸ ಇರುತ್ತದೆ. ಧನವಂತನ ಧ್ಯಾಸ ಎಲ್ಲವೂ ಪ್ರಪಂಚ ವಿಷಯಗಳ ಮೇಲೆ ಇರುತ್ತದೆ. ಧನದಿಂದ ಪ್ರಪಂಚ ವಿಷಯಗಳು ನೆರವೇರುತ್ತವಾದ್ದರಿಂದ ಧನಿಕನಿಗೆ ಪ್ರಪಂಚ ಧ್ಯಾಸ ಹೆಚ್ಚಾಗಿರುತ್ತದೆ. ಅದೇ ಬಡವನಿಗೆ ಪ್ರಪಂಚ ವಿಷಯದ ಧ್ಯಾಸ ಇರುವುದಿಲ್ಲ. ಪ್ರಪಂಚ ಧ್ಯಾಸಗಳನ್ನು ಅವನು ಬಿಟ್ಟಿರುತ್ತಾನೆ. ಧನ ಇಲ್ಲದಿರುವುದರಿಂದ ಪ್ರಪಂಚ ಧ್ಯಾಸಗಳ ತಂಟೆಗೆ ಅವನು ಹೋಗುವುದಿಲ್ಲ. ಅಂತಹವನಿಗೆ ದೈವಜ್ಞಾನ ತಿಳಿದ ತಕ್ಷಣ ಜ್ಞಾನದ ಮೇಲೆ ಧ್ಯಾಸವಿರುತ್ತದೆ.

ಆದ್ದರಿಂದ ಅವನನ್ನು ದೇವರ ಜ್ಞಾನ ಎನ್ನುವ ದಡಕ್ಕೆ (ಗಟ್ಟಿಗೆ) ಹತ್ತಿರವಾಗಿರುವ ವನಾಗಿ ಹೇಳಬಹುದು. ದಡಕ್ಕೆ ಹತ್ತಿರವಾಗಿರುವವನು ಆಗಿರುವುದರಿಂದ ಬಡವನನ್ನು 'ದರಿದ್ರನು' ಎಂದು ಹೇಳಬಹುದು. ಧನವಂತನಿಗೆ ಎಷ್ಟು ಜ್ಞಾನ ಹೇಳಿದರೂ ಹಿಡಿಸುವುದಿಲ್ಲ. ಆತನು ಧನದಿಂದ 'ಗರ್ವ' ಎನ್ನುವ ಗುಣದಲ್ಲಿ ಮುಳುಗಿರುತ್ತಾನೆ. ಆದುದರಿಂದ **ಧನವಂತನಿಗೆ ಜ್ಞಾನ ಲಭಿಸುವುದಕ್ಕಿಂತ ಸೂಜಿ ರಂಧ್ರದಲ್ಲಿ ಒಂಟೆ ತೂರುವುದು ಸುಲಭವೆಂದು** ಹೇಳಿದ್ದಾರೆ. ಪ್ರಪಂಚದಲ್ಲಿ ಧನದಲ್ಲಿ ಎಲ್ಲರಿಗಿಂತ ಕಡಿಮೆಯವನು, ಧನವಿಲ್ಲದೆ ಕಷ್ಟಗಳನ್ನನುಭವಿಸುವವನು 'ಬಡವನು' ಎಂದು ಹೇಳುತ್ತಿದ್ದೇವೆ. 'ದರಿದ್ರ' ಎನ್ನುವ ಪದವೇ 'ಬಡವ' ಎನ್ನುವ ಪದವಾಗಿಯೂ ಸಹ ಕರೆಯಲ್ಪಡುತ್ತಿದೆ. ಧನವಿಲ್ಲದ ಬಡವನಿಗೆ ನಾನು ಮೊದಲ ಲೇಖವನ್ನು ಬರೆಯಲು ಪ್ರಾರಂಭಿಸಿದ್ದೇನೆ.

## ಮೊದಲ ಲೇಖ

***ಇಂದೂಶ್ರೀ ತುಪಾಕುಲ ವೆಂಕಟಪ್ಪ ನವರಿಗೆ ಬರೆಯುವ ಉತ್ತರ ಏನೆಂದರೆ!***

ನೀನು ಕಡಿಮೆ ಕುಲದಲ್ಲಿ ಹುಟ್ಟಿದ್ದೇನೆಂದು, ಬಡತನದಲ್ಲಿ ಜೀವಿಸುತ್ತಿದ್ದೇನೆಂದು ತಿಳಿಕೊಳ್ಳುತ್ತಿದ್ದೀಯಾ. ಕಡಿಮೆ ಕುಲದಲ್ಲಿ ಹುಟ್ಟಿರುವುದಕ್ಕೆ ಇತರರು ನಿನ್ನನ್ನು ಅಂಟಬಾರದವನಾಗಿ ನೋಡುತ್ತಿದ್ದಾರೆಂದು ಬಾಧೆಪಡುತ್ತಿದ್ದೀಯಾ. ಅಷ್ಟೇ ಅಲ್ಲದೆ ಬಡತನದಿಂದ ಎಲ್ಲರಿಗಿಂತ ಕಡಿಮೆಯಾಗಿ ಬದುಕಬೇಕಾಗಿ ಬಂದಿದೆಯೆಂದು ಅಂದುಕೊಳ್ಳುತ್ತಿದ್ದೀಯಾ. ಇವುಗಳೆಲ್ಲವನ್ನು ಅತಿಕ್ರಮಿಸುವುದಕ್ಕೆ ಮತಮಾರ್ಪಾಡು ಮಾಡಿಕೊಳ್ಳಬೇಕೆಂದುಕೊಳ್ಳುತ್ತಿದ್ದೀಯಾ. ಕ್ರೈಸ್ತನಾಗಿ ಬದಲಾದರೆ ಕ್ರೈಸ್ತವ ಸಮಾಜದಲ್ಲಿ ಎಲ್ಲರೊಂದಿಗೆ ಬೆರೆತುಹೋಗಬಹುದೆಂದು, ಅಲ್ಲಿನ ಕುಲವಿವಕ್ಷ ಇರುವುದಿಲ್ಲವೆಂದು ತಿಳಿಕೊಳ್ಳುತ್ತಿದ್ದೀಯಾ. ಮತ ಬದಲಾಗುವುದರಿಂದ ಉದ್ಯೋಗ ಕೊಡುತ್ತೇವೆಂದು ಕ್ರೈಸ್ತರು ಹೇಳಿದ್ದಾರೆ. ಹಾಗೆ ಉದ್ಯೋಗ ಕೊಟ್ಟರೆ ಬಡತನದಿಂದ ಹೊರಬೀಳಬಹುದೆಂದೂ ಸಹ ತಿಳಿದುಕೊಂಡಿದ್ದೀಯಾ. ಇಂತಹ ಆಲೋಚನೆಗಳು ಮನುಷ್ಯನಿಗೆ ಬರುವುದು ಸಹಜವೆ! ಮೇಲಾಗಿ ನೀನಿರುವ

ಪರಿಸ್ಥಿತಿಯಲ್ಲಿ ಯಾರಿದ್ದರೂ ಹಾಗೆ ಆಲೋಚಿಸುತ್ತಾರೆ. ಆಲೋಚನೆಗಳು ಗುಣಗಳಿಂದ ಹುಟ್ಟುತ್ತಿರುತ್ತವೆ. ಗುಣಗಳಲ್ಲಿ ಹುಟ್ಟಿರುವ ಆಲೋಚನೆಗಳನ್ನು ಬುದ್ಧಿ ಗ್ರಹಿಸಿ ಆಲೋಚಿಸುವುದನ್ನು ಮೊದಲುಮಾಡುತ್ತದೆ. ನಂತರ ಮನುಷ್ಯ ಗತದಲ್ಲಿ ಮಾಡಿಕೊಂಡ ಕರ್ಮವನ್ನನುಸರಿಸಿ ಚಿತ್ತವು ನಿರ್ಣಯಿಸುತ್ತದೆ. ಗುಣಗಳಿಂದ ಬಂದಿರುವ ಆಲೋಚನೆಗಳಲ್ಲಿ ಬುದ್ಧಿ ಆಲೋಚಿಸಿದಾಗ, ಬುದ್ಧಿವೊಂದರ ಎರಡು ವಿಧಗಳ ಸೂಚನೆಗಳಲ್ಲಿ ಕರ್ಮಾನುಸಾರ ಚಿತ್ತವು ಚಿತ್ತಗಿಸುತ್ತದೆ. ಆಗ ಚಿತ್ತವು ನಿರ್ಣಯಿಸಿದ ಕಾರ್ಯವು ನಡೆಯುತ್ತದೆ.

ನಿನ್ನ ಗುಣಚಕ್ರದಲ್ಲಿರುವ ಗುಣಗಳು ಮತಮಾರ್ಪಾಡು ವಿಷಯ, ಉದ್ಯೋಗಕ್ಕಾಗಿ ಮತಮಾರ್ಪಾಡು  ಅಗತ್ಯವೆಂಬ ವಿಷಯ ಸಂಕಲ್ಪ ಆಲೋಚನೆಗಳ ರೂಪದಲ್ಲಿ ಬಂದಾಗ, ಬುದ್ಧಿ ಅದನ್ನು ಗ್ರಹಿಸಿ ಎರಡು ವಿಧಗಳಾಗಿ ಆಲೋಚಿಸಿದಾಗ, ಕೊನೆಗೆ ಕರ್ಮಪ್ರಕಾರ ಚಿತ್ತವು ಮತಮಾರ್ಪಾಡು ಸ್ವೀಕರಿಸೆಂದು ಅದರಿಂದ ಉದ್ಯೋಗವನ್ನು ಸಹ ಪಡೆಯಿರೆಂದು ನಿರ್ಣಯಿಸಿದೆ. ಆ ನಿರ್ಣಯ ಶರೀರದೊಳಗೆ ಈ ವಿಧವಾಗಿ ನಡೆದಿದೆಯೆಂದು ನಿನಗೆ ತಿಳಿಯದೆ ಹೋದರೂ, ನೀನು ಮಾತ್ರ ಮತಮಾರ್ಪಾಡು ಹೊಂದಬೇಕೆಂದು ತಿಳಿದುಕೊಂಡಿದ್ದೀಯಾ. ಇದೆಲ್ಲವೂ ಕರ್ಮ ಪ್ರಕಾರ ನಡೆಯುವ ವಿಧಾನ. ಕರ್ಮದಲ್ಲಿ ಮತಮಾರ್ಪಾಡು ಹೊಂದಬೇಕೆಂದು ಇರುವಾಗ ಆ ವಿಧವಾಗಿ ಗುಣಗಳಿಂದ ಕೊನೆಯ ಚಿತ್ತದವರೆಗು ಕೆಲಸಮಾಡಿ ನಡೆಯಬೇಕಾದ ಕೆಲಸವನ್ನು ಸೂಚಿಸುತ್ತದೆ. ಅಂತಹ ನಿರ್ಣಯಗಳು ಕರ್ಮ ವಿಧಾನದಿಂದ  ನಡೆದಿವೆ. ಆದುದರಿಂದ ಅವುಗಳನ್ನು ಯಾರೂ ಇಲ್ಲ ಎನ್ನುವುದಿಲ್ಲ. ಬಂದಿರುವ ನಿರ್ಣ ಯವನ್ನು ಎಲ್ಲರೂ ಆಚರಿಸಬೇಕಾಗಿದೆ. ನೀನು ಹಿಂದೂಗಳಿಂದ ಕ್ರೈಸ್ತರೊಳಗೆ ಮತಮಾರ್ಪಾಡು ಹೊಂದಿದರೆ ಕ್ರೈಸ್ತರು ಸಂತೋಷಪಡುತ್ತಾರೆ, ಹಿಂದೂಗಳು ನಮ್ಮ ಮತ ಕ್ಷೀಣಿಸಿಹೋಗುತ್ತಿದೆಂದು ಬಾಧೆಪಡುತ್ತಾರೆ. ಕರ್ಮಪ್ರಕಾರ ನಡೆಯಬೇಕಾಗಿರುವ ಕಾರ್ಯಗಳನ್ನು ಯಾರೂ ನಿಲ್ಲಿಸಲಾರರು. ಯಾರು ಅಲ್ಲವೆಂದರೂ, ಎಷ್ಟುಜನ ಬೇಡವೆಂದರೂ ನಡೆಯಬೇಕಾದ ಕೆಲಸಗಳು ನಡೆಯದೆ ಇರುವುದಿಲ್ಲ.

ದೇವರು ಮನುಷ್ಯರಿಗೆ ಕೊಟ್ಟಿರುವ ಜ್ಞಾನದಿಂದ ಕರ್ಮಪ್ರಕಾರ ನಡೆಯುತ್ತದೆಂದು ಹೇಳುವ ಕಾರ್ಯಗಳನ್ನು ಸಹ ನಡೆಯದಂತೆ ನಿಲ್ಲಿಸಬಹುದು. ದೈವ ಜ್ಞಾನ ಕರ್ಮವನ್ನು ನಿರೋಧಿಸಬಲ್ಲದು. ಅದರಪ್ರಕಾರ ಮನುಷ್ಯರು ತಮ್ಮ ತಲೆಯಲ್ಲಿನ ಜ್ಞಾನವನ್ನು ಉಪಯೋಗಿಸಿ ಚಿತ್ತದಿಂದ ನಿರ್ಣಯಿಸಲ್ಪಟ್ಟ ಕಾರ್ಯಗಳನ್ನು ಕೂಡಾ ನಡೆಯದಂತೆ ನಿಲ್ಲಿಸಬಹುದು. ಕರ್ಮದಲ್ಲಿರುವ ಕಾರ್ಯಗಳನ್ನು ಮನುಷ್ಯ ಕರ್ಮವಶನಾಗಿ ಮಾಡುತ್ತಿರುತ್ತಾನೆಂದು ಹೇಳಿದರೂ, ಅಂತಹ **ಕರ್ಮದಲ್ಲಿನ ಕಾರ್ಯಗಳನ್ನು ಸಹ ಮನುಷ್ಯ ತನ್ನ ಜ್ಞಾನದಿಂದ ನಿಲ್ಲಿಸುವ ಸತ್‌ಸೌಕರ್ಯವನ್ನು ದೇವರು ಕಲ್ಪಿಸಿದ್ದಾನೆ.** ದೇವರು ಕೊಟ್ಟಿರುವ ಜ್ಞಾನದ ಪ್ರಕಾರ ಯೋಚಿಸಿದರೆ ಹೀಗೆ ಹೇಳಬಹುದು. ಮನುಷ್ಯ ಕರ್ಮಪ್ರಕಾರವೇ ತನ್ನ ಪ್ರಮೇಯ ಇಲ್ಲದೆ ಯಾವುದೊ ಒಂದು ಕುಲದಲ್ಲಿ ಹುಟ್ಟುವುದು ನಡೆಯುತ್ತಿರುತ್ತದೆ. ಹಾಗೆ ಅವನು ಬದುಕಬೇಕಾದ ಜೀವನ ನಿರ್ಣಯಿಸಲ್ಪಡುತ್ತದೆ. ಮತಗಳು ಹನ್ನೆರಡಿದ್ದರೂ ಅದರಲ್ಲಿ ಮುಖ್ಯವಾದವು ಮೂರು ಮಾತ್ರವೆ! ಹಿಂದೂ, ಕ್ರೈಸ್ತ, ಮುಸ್ಲಿಮ್ ಎನ್ನುವ ಮೂರು ಮತಗಳಲ್ಲಿ ನೀನು ಹಿಂದೂ ಮತದಲ್ಲಿ ಹುಟ್ಟಿರುವೆ. ಹುಟ್ಟುವಿಕೆಯಿಂದ ಬಂದಿರುವ ಮತ ದೇವರಕೊಟ್ಟಿರುವುದೆಂದು ತಿಳಿಯಬೇಕಾಗಿದೆ. ಮನುಷ್ಯನ ಜೀವನದಲ್ಲಿ ನಡೆಯುವ ಕೆಲಸಗಳೆಲ್ಲ ಕರ್ಮಪ್ರಕಾರವೇ ನಡೆಯುವವಾದರೂ, ಅದರಲ್ಲಿ ಕೆಲವು ಒಳ್ಳೆಯ ಕೆಲಸಗಳು ಕೆಲವು ಕೆಟ್ಟ ಕೆಲಸಗಳು ಇರುವುದು ಸಹಜವೇ!

ಕರ್ಮಪ್ರಕಾರ ನಡೆಯುವ ಒಳ್ಳೆಯ ಕೆಟ್ಟ ಕಾರ್ಯಗಳು ತನ್ನ ಪ್ರಮೇಯ ಇಲ್ಲದೆ ನಡೆಯುತ್ತಿವೆಯೆಂದು ಮನುಷ್ಯ (ಜೀವಿಯು) ತಿಳಿದುಕೊಂಡರೆ ಅವನಿಗೆ ಎಂತಹ ಪಾಪಪುಣ್ಯಗಳು ಅಂಟಿಕೊಳ್ಳುವುದಿಲ್ಲ. ಒಂದುವೇಳೆ ಮನುಷ್ಯನಿಗೆ ಕರ್ಮ ಸಿದ್ಧಾಂತ ಜ್ಞಾನ ತಿಳಿಯದಿದ್ದರೆ, ನಡೆಯುವ ಕೆಲಸಗಳೆಲ್ಲ ಜೀವಿಯು ತಾನೇ ಸ್ವತಃವಾಗಿ ಮಾಡುತ್ತಿದ್ದೇನೆಂದು ಅಂದುಕೊಂಡರೆ, ಆ ಜೀವಿಗೆ ಪಾಪಪುಣ್ಯಗಳು ತಪ್ಪದೆ ಅಂಟಿಕೊಳ್ಳುತ್ತವೆ. ಆದರೆ ನೀನು ಈಗ ನಿನ್ನ ಹಿಂದಿನ ಕರ್ಮ ನಿನ್ನನ್ನು ನಡೆಸುತ್ತಿದೆಯೆಂದು ತಿಳಿಯದೆ, ಮತ ಬದಲಾಯಿಸಬೇಕೆಂಬ ನಿರ್ಣಯ ನಿನ್ನದೇಯೆಂದು ಅಂದುಕೊಳ್ಳುತ್ತಿದ್ದೇನೆ. ಮತಮಾರ್ಪಾಡು

ದೈವದ್ರೋಹವಾಗುತ್ತದೆ. ಆದ್ದರಿಂದ ಮತಮಾರ್ಪಾಡಿನಿಂದ ನಿನಗೆ ದೊಡ್ಡ ಪಾಪ ಸಂಭವಿಸುತ್ತದೆ. ಒಂದುವೇಳೆ ಜ್ಞಾನದ ಪ್ರಕಾರ ನಡೆದುಕೊಂಡರೆ ಕರ್ಮವನ್ನು ಹೊಂದದೆ ತಪ್ಪಿಸಿಕೊಳ್ಳಬಹುದು. ಹಾಗಲ್ಲದೆ ಜ್ಞಾನದಿಂದ ಅಂದರೆ **ಜ್ಞಾನಶಕ್ತಿಯಿಂದ ಕರ್ಮವನ್ನು ನಿರೋಧಿಸಿದಂತೆ ಕಾರ್ಯವನ್ನೇ ನಿರೋಧಿಸಬಹುದು.** ಆಗ ಮತಮಾರ್ಪಾಡು ಹೊಂದದೆ ಹಿಂದೂಮತದಲ್ಲಿಯೇ ಇರಬಹುದು. ಕೆಲವು ಕರ್ಮಗಳಲ್ಲಿ ಕಾರ್ಯಗಳು ನಡೆದರೂ ಬರುವ ಕರ್ಮವನ್ನು ನಿರೋಧಿ ಸಿಕೊಳ್ಳ ಬಹುದು. ಕೆಲವು ಕರ್ಮಗಳಲ್ಲಿ ಕಾರ್ಯಗಳನ್ನೇ ನಿರೋಧಿಸಿಕೊಳ್ಳ ಬಹುದು. ಈಗ ನೀನು ಮತಮಾರ್ಪಾಡು ಕರ್ಮವನ್ನು ಕಾರ್ಯರೂಪದಲ್ಲಿ ಆಚರಿಸಿ ಬರುವಂತಹ ಕರ್ಮವನ್ನು ನಿರೋಧಿಸುವುದಕ್ಕಿಂತ ಮೊದಲಿಗೆ ಕರ್ಮವನ್ನು ಆಚರಿಸದೆ ಕಾರ್ಯವನ್ನೇ ಮಾಡದಿರುವುದು ಒಳ್ಳೆಯದು.

ಮನುಷ್ಯ ಸ್ವಲ್ಪ ಜ್ಞಾನವನ್ನು ಚೆನ್ನಾಗಿ ತಿಳಿದು ಜ್ಞಾನಶಕ್ತಿಯನ್ನು ಸಂಪಾದಿಸಿಕೊಂಡಿದ್ದರೆ ಇರುವ ಕರ್ಮವನ್ನೇ ಇಲ್ಲದಂತೆ ಮಾಡಿಕೊಂಡರೆ ನಡೆಯಬೇಕಾಗಿರುವುದು ನಡೆಯದಂತೆ ನಿಂತುಹೋಗುತ್ತದೆ. ಇದು ಮತಮಾರ್ಪಾಡು ವಿಷಯವಾಗಿದ್ದು, ಎರಡನೆಯದು ಬದುಕುಬಾಳಿಗಾಗಿ ಉದ್ಯೋಗವನ್ನು ಪಡೆಯುವುದಕ್ಕೆ ಕ್ರೈಸ್ತ ಮತದಲ್ಲಿ ಸೇರಬೇಕೆಂದುಕೊಂಡಿದ್ದೀಯಾ. "ಉದ್ಯೋಗದಿಂದ ಜೀವನ ಚೆನ್ನಾಗಿರುತ್ತದೆ" ಎಂದು ತಿಳಿದುಕೊಳ್ಳುತ್ತಿದ್ದೇವೆ. **"ಭವಿಷ್ಯತ್ತು ಅಂಧಕಾರ"** ಎನ್ನುವ ಸೂತ್ರದ ಪ್ರಕಾರ ಮುಂದೆ ನಡೆಯುವಂತಹ ಕಾಲದಲ್ಲಿ ಏನು ನಡೆಯುತ್ತದೊ ಯಾರಿಗೂ ತಿಳಿದಿಲ್ಲ. ನಿನ್ನ ಜೀವಿನಕಾಲವೆಲ್ಲವೂ ಹೀಗೆ ಬದುಕಬೇಕೆಂದು ಮೊದಲೆ ನಿರ್ಣಯಿಸಲ್ಪಟ್ಟಿರುತ್ತದೆ. ಆದ್ದರಿಂದ ಬರುವಂತಹ ಉದ್ಯೋಗದಿಂದ ನೀನು ಅಂದುಕೊಂಡಂತೆ ನಡೆಯುತ್ತದೆನ್ನುವ ನಂಬಿಕೆಯಿಲ್ಲ. ನಡೆಯಬೇಕಾಗಿರುವುದು ಮೊದಲೆ ನಿರ್ಣಯಿಸಲ್ಪಟ್ಟಿರುತ್ತದೆನ್ನುವ ವಿಷಯ ತಿಳಿಯದೆ ಮನುಷ್ಯ ತನ್ನ ಸ್ವಂತ ಪ್ರಯತ್ನ ಮಾಡಬೇಕೆಂದುಕೊಳ್ಳುತ್ತಾನೆ. ಅದರಿಂದ ಮನುಷ್ಯನಿಗೆ ಪಾಪಪುಣ್ಯ ಕರ್ಮಗಳು ಅಂಟಿಕೊಳ್ಳುವುದು ಹೊರತು ನಡೆಯುವುದೇನು ಇಲ್ಲ. ನಿನ್ನ ಜೀವನದಲ್ಲಿ ನಿನ್ನನ್ನು ಶಾಸಿಸಿ ನಡೆಸುವ ಕರ್ಮ ಒಂದಿದೆಯೆಂದು ನಿನಗೆ ತಿಳಿಯದೆ ನಿನ್ನ ಸ್ವಂತ ಪ್ರಯತ್ನ ಮಾಡಿದ್ದೀಯಾ.

ಅದಕ್ಕಿಂತ ನೀನು ಮಾಡಬೇಕಾದ ಮುಖ್ಯವಾದ ಕಾರ್ಯವೊಂದು ಇದೆ. ನಿನ್ನ ಅಧೀನದಲ್ಲಿ ಇಲ್ಲದೆ ನಿನ್ನನ್ನು ನಡೆಸುವ ಕರ್ಮಗಳನ್ನು ನೀನು ಇಲ್ಲದಂತೆ ಮಾಡಿಕೊಳ್ಳುವುದೆ ಮುಖ್ಯವಾದ ಕೆಲಸ. ಕಡುಬಡತನ ಜೀವನವೆಂದು, ಹೀನ ಕುಲವೆಂದು ನೀನು ಜೀವನವನ್ನು ಬದಲಿಸಿಕೊಳ್ಳುವುದಕ್ಕೆ, ಉದ್ಯೋಗವನ್ನು ನೋಡಿಕೊಳ್ಳಬೇಕೆಂದುಕೊಂಡಿದ್ದೀಯಾ. ಹಾಗೆ ಹೀನ ಕುಲವೆಂದು ಮತವನ್ನೇ ಮಾರ್ಪಾಡಿಸಬೇಕೆಂದುಕೊಂಡಿದ್ದೀಯಾ. ಹಾಗೆ ಮತವನ್ನು ಮಾರ್ಪಾಡಿಸಿದರೂ, ಉದ್ಯೋಗವನ್ನು ನೋಡಿಕೊಂಡರೂ, ನಿನ್ನ ಜೀವನ ಬದಲಾಗುತ್ತದೆನ್ನುವ ನಂಬಿಕೆ ಇಲ್ಲ. ಜೀವನದಲ್ಲಿ ಬದಲಾವಣೆ ಬರಬೇಕೆಂದರೆ ಕುಲಗಳಲ್ಲಿ ಗೌರವವಾಗಲಿ, ವೃತ್ತಿಯಲ್ಲಿ ಪ್ರತಿಷ್ಠೆಯಾಗಲಿ ಬರಬೇಕೆಂದರೆ ಕರ್ಮವನ್ನನು ಸರಿಸಿಯೇ ಇರುತ್ತದೆ. ಆದುದರಿಂದ ಕರ್ಮವನ್ನು ಬದಲಿಸಿಕೊಳ್ಳುವುದೆ ನೀನು ಮೊದಲು ಮುಖ್ಯವಾಗಿ ಮಾಡಬೇಕಾದ ಕೆಲಸವೆಂದು ತಿಳಿದುಕೊ!

ಜೀವನದಲ್ಲಿರುವ ಕರ್ಮ ಹೋಗಬೇಕೆಂದರೆ, ಜೀವನದಲ್ಲಿ ಬದಲಾವಣೆ ಬರಬೇಕೆಂದರೆ ಮೊದಲು ದೈವಜ್ಞಾನವನ್ನು ಕುರಿತು ತಿಳಿದುಕೊ. ಆದರೆ ನಿನಗೆ ಕೆಲವು ಅನುಮಾನಗಳು ಪ್ರಶ್ನೆಗಳ ರೂಪದಲ್ಲಿ ಬಂದು ಸುಮಾರು 50 ವರ್ಷಗಳ ವಯಸ್ಸಿನಲ್ಲಿ ನನಗೆ ಜ್ಞಾನ ತಿಳಿಯುತ್ತದಾ? ಎನ್ನುವ ಪ್ರಶ್ನೆಗಳು ಬರುತ್ತವೆ. ಜ್ಞಾನಕ್ಕು ವಯಸ್ಸಿಗು ಸಂಬಂಧವಿಲ್ಲ. ಯಾವ ವಯಸ್ಸಿನಲ್ಲಿ ಅದರೂ ದೈವಜ್ಞಾನವನ್ನು ತಿಳಿಯಬಹುದು. ಜ್ಞಾನದಿಂದ ನಿನ್ನ ಜೀವನದಲ್ಲಿ ನಡೆಯುವ ಸಮಸ್ಯೆಗಳಿಗೆ ಪರಿಷ್ಕಾರ ದೊರೆಯುತ್ತದೆ. ಪ್ರಸ್ತುತ ನಿನ್ನ ಜೀವನದಲ್ಲಿ ಒಂದು ಸಂಘಟನೆ ನಡೆದಿದೆ. ನೀನು ಹರಿಜನ ಕುಟುಂಬದಲ್ಲಿ ಹುಟ್ಟಿದವನು. ನಿನ್ನಲ್ಲಿ ಎಂತಹ ಕೆಟ್ಟಭಾವನೆ ಇಲ್ಲದಿದ್ದರೂ, ನಿನ್ನ ಪ್ರಮೇಯ ಇಲ್ಲದೆ ನಿನ್ನ ಜೀವನದೊಳಗೆ ಒಬ್ಬ ಬ್ರಾಹ್ಮಣ ಸ್ತ್ರೀ ಬಂದು ನಿಂತುಹೋಗಿದೆ. ನಿನ್ನ ಪ್ರಯತ್ನ ಏನು ಇಲ್ಲದಿದ್ದರೂ ಆಕೆಯೇ ನಿನ್ನ ಮೇಲೆ ಇಷ್ಟವನ್ನು ಬೆಳೆಸಿಕೊಂಡು ನಿನ್ನ ಹತ್ತಿರಕ್ಕೆ ಬರುವುದು ನಡೆದಿದೆ. ಆಕೆ ಮದುವೆಯಾದ ನಂತರ ಹತ್ತು ವರ್ಷಗಳು ಗಂಡನೊಂದಿಗೆ ಸಂಸಾರ ಮಾಡಿ ಕೊನೆಗೆ ಗಂಡನನ್ನು ಬಿಟ್ಟು ನಿನ್ನ ಹತ್ತಿರಕ್ಕೆ ಬಂದಿದೆ. ಆಕೆಗೆ ಸಂತತಿ ಇಲ್ಲ ಆದ್ದರಿಂದ ಗಂಡ ಸಹ ಆಕೆಯನ್ನು ಕುರಿತು ಹಿಡಿಸಿಕೊಳ್ಳದೆ

ಬಿಟ್ಟಿದ್ದಾನೆ. ಆಕೆ ನಿನ್ನ ಹತ್ತಿರಕ್ಕೆ ಬಂದು ಸುಮಾರು ಐದು ವರ್ಷಗಳಾಗಿದೆ. ಈಗ ಆಕೆ ಗರ್ಭಧರಿಸಿ ಏಳು ತಿಂಗಳಾಗಿದೆ. ಇಂತಹ ಪರಿಸ್ಥಿತಿಯಲ್ಲಿ ಆಕೆಯ ಗಂಡ ಬಂದು ಆಕೆಯನ್ನು ಪುನಃ ತನ್ನ ಹತ್ತಿರಕ್ಕೆ ಬಾಯೆಂದು ಕರೆಯುತ್ತಿದ್ದಾನೆ. ಐದು ವರ್ಷಗಳಿಂದ ನಿನ್ನ ಹತ್ತಿರವಿರುವ ಆ ಬ್ರಾಹ್ಮಣ ಸ್ತ್ರಿ "ನನ್ನ ಗಂಡ ಕರೆಯುತ್ತಿದ್ದಾನೆ ನಾನು ಅಲ್ಲಿಗೆ ಹೋಗಬೇಕಾ ಅಥವಾ ಇಲ್ಲಿಯೇ ಇರಬೇಕಾ?' ಎಂದು ನಿನ್ನನ್ನು ಸಲಹೆ ಕೇಳಿದ್ದಾಳೆ. ಆ ಮಾತಿಗೆ ನೀನು ಯಾವಕಡೆ ಸಮಾಧಾನ ಹೇಳಲಾರದೆ ಅಯೋಮಯ ಸ್ಥಿತಿಯಲ್ಲಿ ಬಿದ್ದುಹೋಗಿದ್ದೀಯಾ. ಏನು ಅರ್ಥವಾಗದ ಸ್ಥಿತಿಯಲ್ಲಿ ನೀನು ಇದ್ದೀಯಾ. ಪ್ರಪಂಚ ರೀತ್ಯಾ ಯಾವುದು ನಿರ್ಣಯಿಸಿಕೊಳ್ಳದ ಇಂತಹ ಸಮಸ್ಯೆಗಳು ಮನುಷ್ಯನ ಜೀವನದಲ್ಲಿ ಅನೇಕ ಬರುತ್ತಿರುತ್ತವೆ. ಈ ವಿಧವಾದ ಸಮಸ್ಯೆಗಳಿಂದ ಮನುಷ್ಯ ಮಾನಸಿಕ ವ್ಯಥೆಗೆ ಗುರಿಯಾಗುತ್ತಾನೆ. ಮಾನಸಿಕ ಬಾಧೆಗೆ ಹೊರಗಿನ ಔಷಧಿಗಳು ಕೆಲಸಕ್ಕೆ ಬರುವುದಿಲ್ಲ. ಆದುದರಿಂದ ಮನುಷ್ಯ ಮಾನಸಿಕ ಬಾಧೆಯಿಂದ ಹೊರಬರಬೇಕೆಂದರೆ ಆತನಿಗೆ ದೈವಜ್ಞಾನವೇ ಔಷಧಿಯಾಗಿ ಕೆಲಸ ಮಾಡುತ್ತದೆ. ಆದುದರಿಂದ ಮೊದಲು ನಿನ್ನ ಸಮಸ್ಯೆಯನ್ನು ಪರಿಷ್ಕಾರ ಮಾಡಿಕೊಳ್ಳುವುದಕ್ಕೆ ದೈವಜ್ಞಾನವನ್ನು ತಪ್ಪದೆ ತಿಳಿದುಕೊಳ್ಳಿರಿ!.

ಜ್ಯೋತಿಷ್ಯ ಶಾಸ್ತ್ರದ ಪ್ರಕಾರ ನೀನು ನಿನ್ನ ಜೀವನದಲ್ಲಿ ದೇವ್ವಗಳಿಂದ ಪೀಡಿಸಲ್ಪಡುತ್ತಿದ್ದೀಯಾ. ಗತದಲ್ಲಿ ದೇವ್ವಗಳಿಂದ ಎಷ್ಟೋ ಬಾಧೆಗಳನ್ನು ಅನುಭವಿಸಿದ್ದೀಯಾ. ನಡೆಯುವಂತಹ ಕಾಲದಲ್ಲಿಯೂ ಸಹ ಅವುಗಳಿಂದ ಎಷ್ಟೋ ಬಾಧೆಗಳು ಅನುಭವಿಸಬೇಕಾಗಿದೆ. ಆ ಬಾಧೆಗಳಿಂದ ತಪ್ಪಿಸಿಕೊಳ್ಳಬೇಕೆಂದರೆ ಕರ್ಮಗಳನ್ನು ಸುಡುವ ಜ್ಞಾನವೆಂಬ ಅಗ್ನಿ ನಿನ್ನ ಹತ್ತಿರವಿರಬೇಕು. **ಜ್ಞಾನಾಗ್ನಿ** ನಿನ್ನಹತ್ತಿರ ಇರುವಾಗ ಅನುಭವಿಸಬೇಕಾದ ಕರ್ಮಗಳಿಂದ ಹೊರಬೀಳಬಹುದು. ಜ್ಞಾನಾಗ್ನಿಯಿಂದ ಕರ್ಮಗಳನ್ನು ಸುಟ್ಟುಕೊಳ್ಳಬಹುದು. ಜೀವನದಲ್ಲಿ ಎಷ್ಟೋ ಬದಲಾವಣೆಯನ್ನು ತರುವ ಜ್ಞಾನವನ್ನು, ಮನುಷ್ಯನ ಕರ್ಮಗಳನ್ನು ಸುಟ್ಟುಹಾಕುವ ಜ್ಞಾನವನ್ನು, ಪ್ರಪಂಚದಲ್ಲಿ ಎಲ್ಲರಿಗೂ ಸಮಾನವಾಗಿ ಸಿಗುವಂತಿರುವ ಜ್ಞಾನವನ್ನು, ಎಲ್ಲಾ ಮತಗಳಲ್ಲಿ ಒಂದೇಶಕ್ತಿ ಇರುವುದಾಗಿ

ಕರ್ಮಗಳನ್ನು ಇಲ್ಲದಂತೆ ಮಾಡುವ ಜ್ಞಾನವನ್ನು, ನೀನು ಇಂದಿನಿಂದ ತಿಳಿದುಕೊ. ಪ್ರಪಂಚದಲ್ಲಿ ದೈವಜ್ಞಾನವೆಂಬ ಮುಸುಗಿನಲ್ಲಿ ಅನೇಕ ಜ್ಞಾನಗಳು ಇವೆ. ಅವುಗಳನ್ನು ನೋಡಿ ಅವುಗಳ ತಂಟೆಗೆ ಹೋಗದಂತೆ ಅಸಲಾದ ಜ್ಞಾನವನ್ನು ಗುರುತಿಸಿ ಅದನ್ನೇ ತಿಳಿದುಕೊಳ್ಳುವುದಕ್ಕೆ ಪ್ರಯತ್ನಿಸು.

ಈ ದಿನ ನೀನು ಜ್ಞಾನವನ್ನು ತಿಳಿದುಕೊಳ್ಳುತ್ತೇನೆಂದು ಅಂದುಕೊಂಡರೂ ಯಾವುದು ನಿಜವಾದ ಜ್ಞಾನವೆಂದು ತಿಳಿಯದೆ ಶಕ್ತಿಯಿಲ್ಲದ ಜ್ಞಾನಗಳನ್ನು, ಅಗ್ನಿಯಿಲ್ಲದ ಜ್ಞಾನಗಳನ್ನು ಮನುಷ್ಯ ಆಶ್ರಯಿಸುತ್ತಿದ್ದಾನೆ. ಅಂತಹ ಜ್ಞಾನಗಳನ್ನು ಆಶ್ರಯಿಸುವುದರಿಂದ ಮನುಷ್ಯನಿಂದ ಬರುವ ಕರ್ಮ ಹೋಗುವುದಿಲ್ಲ. ಹೊಸದಾಗಿ ಬರುವ ಕರ್ಮ ಬರದೆ ಇರುವುದಿಲ್ಲ. ಅಂತಹ ಜ್ಞಾನಗಳಿಂದ ಎಂತಹ ಪ್ರಯೋಜನೆಯೂ ಇರುವುದಿಲ್ಲ. ಆದುದರಿಂದ ಪ್ರಸ್ತುತ ಕಾಲದಲ್ಲಿ ಆಚಲವೆಂದು, ಕುಮಾರಿ ಸಮಾಜವೆಂದು, ಶ್ವಾಸದಮೇಲೆ ಧ್ಯಾಸವೆಂದು, ವೈಷ್ಣವವೆಂದು, ಶೈವವೆಂದು ಕರೆಯುವವರ ಬಳಿ ಸೇರಿ ಎಷ್ಟು ಜ್ಞಾನವನ್ನು ತಿಳಿದರೂ ಪ್ರಯೋಜನೆ ಇರುವುದಿಲ್ಲ. ಆದುದರಿಂದ **ಕರ್ಮಗಳನ್ನು ದಹಿಸುವ ಶಕ್ತಿ ಇರುವ ತ್ರೈತ ಸಿದ್ಧಾಂತ ಬೋಧನೆಗಳನ್ನು** ತಿಳಿದು ಆಚರಿಸಲ್ಪಟ್ಟರೆ, ನಿನ್ನ ಕರ್ಮಗಳು ಸುಟ್ಟುಹೋಗುತ್ತವೆ. ಅನುಭವಿಸುವ ಕರ್ಮವೂ ಸಹ ಮಧ್ಯದಲ್ಲಿ ಬಿಟ್ಟು ಹೋಗುತ್ತದೆ. ಆದುದರಿಂದ ನಿನ್ನ ಶ್ರೇಯೋಭಿಲಾಷಿಯಾಗಿ ನಾನು ಹೇಳುವುದೇನೆಂದರೆ! ನೀನು ತ್ರೈತ ಸಿದ್ಧಾಂತ ಜ್ಞಾನವನ್ನು ತಿಳಿದುಕೊ! ಮೂರು ಗುಣಗಳ ಕರ್ಮಗಳಿಂದ ಹೊರಬೀಳು!! ಕರ್ಮಗಳಿಗೆ ದೂರವಾಗಿರು, ತ್ರೈತ ಜ್ಞಾನಕ್ಕೆ ದಾಪಾಗಿರು!!!

ಇಂತಿ

ನಿಮ್ಮ ಶ್ರೇಯೋಭಿಲಾಷಿ

**ಆಚಾರ್ಯ ಪ್ರಬೋಧಾನಂದ ಯೋಗೀಶ್ವರರು**

# ಎರಡನೆ ಲೇಖ

ಪ್ರಭುತ್ವ ಪಾಲಕನಿಗೆ...

ಗೌರವಾನ್ವಿತರಾದ ಕೆ.ಏ.ರಾವ್‌ನವರಿಗೆ ಬರೆಯುವ ಉತ್ತರ ಏನೆಂದರೆ! ನೀವು ರಾವ್ ಎನ್ನುವ ಹೆಸರಿನಿಂದಿರುವ ನಿಮ್ಮನ್ನು ಎಲ್ಲರೂ ರೆಡ್ಡಿಯವರೆ ಎಂದು ಕರೆಯುತ್ತಾರೆ. ನಿಮ್ಮ ನಿಜವಾದ ಹೆಸರು ಪಾಡುಕುಂಟಾ ರೆಡ್ಡಿ. ನಿಮಗೆ ನಾನು ಬರೆಯುವ ಲೇಖ ನಿಮ್ಮಲ್ಲಿ ಬದಲಾವಣೆಯನ್ನು ತರುತ್ತದೆಂದು ನಂಬುತ್ತಿದ್ದೇನೆ, ಬದಲಾವಣೆ ತರಬೇಕೆಂದು ಕೋರುಕೊಳ್ಳುತ್ತಿದ್ದೇನೆ. ನೀವು ಚಿಕ್ಕಂದಿನಿಂದ ನಾಯಕತ್ವ ಲಕ್ಷಣಗಳು ಹೊಂದಿರುವ ಮಾತು ನಿಜವೇ ಆದರೂ, ಅದರೊಂದಿಗೆ ಆರು ಕೆಟ್ಟ ಗುಣಗಳು ಎಲ್ಲರಿಗಿಂತ ಹೆಚ್ಚಾಗಿ ಹೊಂದಿದ್ದೀರ. ನೀವು ಕೆಲವು ವರ್ಷಗಳಿಂದ ರಾಜಕೀಯದಲ್ಲಿ ಯಾವುದೊ ಒಂದು ಪಾತ್ರ ಪೋಷಿಸಿದರೂ ನೀವು ನಾಯಕನಾಗಿಯೇ ಇರುತ್ತಿದ್ದರು. ಸುಮಾರು ನಿಮ್ಮ ವಯಸ್ಸು ಐವತ್ತು ವರ್ಷಗಳು ಕಳೆದುಹೋದ ನಂತರ ಈಗೀಗ ಸರ್ಕಾರದಲ್ಲಿ ಪಾಲಕನಾಗಿ ಆಯ್ಕೆಯಾಗಿದ್ದೀರ. ಸರ್ಕಾರದ ಗೌರವ ಹೊಂದಿದ್ದೀರ. ನೀವು ರಾಜಕೀಯದೊಳಗೆ ಬರಬೇಕೆಂದುಕೊಂಡಾಗಲಿಂದ ಮಾಡಿದ ಕಾರ್ಯಗಳೆಲ್ಲವೂ ಕೆಟ್ಟ ಗುಣಗಳಿಂದ ಕೂಡಿಕೊಂಡ ಕೆಟ್ಟ ಕಾರ್ಯಗಳೆ ಇವೆ.

ರಾಜಕೀಯ ಭವಿಷ್ಯತ್ತಿಗಾಗಿ ನೀವು ಮಾಡಿದ ಕೆಲಸಗಳೆಲ್ಲವೂ ಪೂರ್ತಿಧ್ಯಾಸ ಹೊಂದಿ, ಪೂರ್ತಿ ಬುದ್ಧಿಯಿಂದ ಯುಕ್ತಿಯಾಗಿ ಮಾಡುವುದಾಗಿದೆ. ಆದರೇ ಪ್ರತಿ ಕೆಲಸದ ಹಿಂದೆ ನೀನು ನೀನಂದುಕೊಂಡ ರಾಜಕೀಯದಲ್ಲಿ ಸ್ವಲ್ಪ ಅಭಿವೃದ್ಧಿಯಾಗುತ್ತಾ ಬಂದಿದ್ದೀಯಾ. ನೀನು ಮಾಡಿರುವುದು ನಿನ್ನ ಅಭಿವೃದ್ಧಿಗೆ ಆದರೂ, ಅವು ಎಲ್ಲಾ ಒಳ್ಳೆಯ ಗುಣಗಳಿಂದ ಮಾಡಿರುವವು ಅಲ್ಲ. ಎಲ್ಲಾ ಕೆಟ್ಟ ಗುಣಗಳಿಂದ ಮಾಡಿರುವವೆ ಇವೆ. ಯಾರಿಗಾದರೂ ಒಂದು ಕಾರ್ಯವನ್ನು ಮಾಡುವಾಗ ತನ್ನ ಉದ್ದೇಶದ ಮೇಲೆ ಧ್ಯಾಸ ಇರುತ್ತದೆ ಆದರೆ ತಾನು ಮಾಡುವ ಕೆಲಸ ಒಳ್ಳೆಯದಾ ಎಂದು

ಯಾರೂ ನೋಡುವುದಿಲ್ಲ. ಯಾರ ಲೆಕ್ಕದಲ್ಲಿ ಅವರು ಮಾಡುವ ಕೆಲಸ ಒಳ್ಳೆಯದಾಗಿಯೇ ಕಾಣಿಸುತ್ತದೆ. ನಿನ್ನ ಲೆಕ್ಕದಲ್ಲಿ ನೀನು ಮಾಡಿರುವುದು ನಿನಗೆ ಒಳ್ಳೆಯದೆ. ಅದರ ಫಲಿತವಾಗಿ ರಾಜಕೀಯದಲ್ಲಿ ನೀನು ಅಭಿವೃದ್ಧಿಯಾಗುತ್ತಾ ಬಂದಿದ್ದೀಯಾ. ರಾಜಕೀಯ ರಂಗದಲ್ಲಿ ನೀನು ಅಭಿವೃದ್ಧಿಯಾದಂತೆ ನಿನಗೆ ಅರ್ಥವಾಗಿದೆ. ಅದರ ಫಲಿತವಾಗಿ ಈದಿನ ಅಧಿಕಾರ ಪಾರ್ಟಿಯಲ್ಲಿ ಒಬ್ಬ ನಾಯಕನಾಗಿದ್ದೂ, ಸರ್ಕಾರದ ಪಾಲನೆಯಲ್ಲಿ ಒಂದು ಗೌರವಪ್ರದವಾದ ಪದವಿಯಲ್ಲಿ ಇದ್ದೀಯಾ.

ನೀನು ಮಾಡಿರುವ ಪ್ರತಿ ಕೆಲಸದ ಹಿಂದೆ ಎರಡು ಫಲಿತಗಳಿವೆಯೆಂದು ನಿನಗೆ ತಿಳಿದಿಲ್ಲ. ನಿನಗೆ ತಿಳಿದಿರುವುದು ಒಂದು ಫಲಿತವು ಮಾತ್ರವೆ. ಅದು ಕಾಣಿಸುವ ಫಲಿತ. ನೀನು ಮಾಡಿದ ಕೆಲಸಗಳಿಗೆ ನೀನು ರಾಜಕೀಯವಾಗಿ ಅಭಿವೃದ್ಧಿಯಾಗಿದ್ದೇನೆನ್ನುವುದು ಮಾತ್ರ ತಿಳಿದಿದೆ. ಅದೇ ನಿನಗೆ ತಿಳಿದ ಫಲಿತ. ಆದರೆ ನಿನಗೆ ಕಾಣಿಸದಂತೆ, ತಿಳಿಯದಂತೆ ಕಣ್ಣಿಗೆ ಕಾಣಿಸದ ಫಲಿತವೂ ಸಹ ಒಂದು ಬಂದಿದೆಯೆಂದು ನಿನಗೆ ತಿಳಿದಿಲ್ಲ. ಕಣ್ಣಿಗೆ ಕಾಣಿಸುವ ಫಲಿತವು ಯಾವ ರೂಪದಲ್ಲಿ ಆದರೂ ಇರಬಹುದು. ಅದು ನಿನಗೆ ರಾಜಕೀಯವಾಗಿಯೇ ಹೆಚ್ಚಾಗಿ ನಡೆದಿದೆ. ಕಣ್ಣಿಗೆ ಕಾಣಿಸದ ಫಲಿತ ಮಾತ್ರ 'ಪಾಪ ಮತ್ತು ಪುಣ್ಯ' ಎಂಬ ಎರಡು ವಿಧಗಳಾಗಿ ಬಂದಿರುತ್ತದೆ. ಆದರೆ ಮಾಡಿದ ಕೆಲಸ ಒಳ್ಳೆಯದಾಗಿರುವಾಗ ಅಂದರೆ! ಆರು ಒಳ್ಳೆಯ ಗುಣಗಳಿಂದ ಮಾಡಿದ್ದರೆ, ಅವುಗಳಿಂದ ಪುಣ್ಯ ಬರುತ್ತದೆ. ಹಾಗಲ್ಲದೆ ನೀನು ಮಾಡಿರುವುದು ಆರು ಕೆಟ್ಟ ಗುಣಗಳ ಕೆಲಸಗಳೇ ಆಗಿರುವುದರಿಂದ ನಿನಗೆ ಬಂದಿರುವುದು ಎಲ್ಲವೂ ಪಾಪವೇ ಎಂದು ತಿಳಿಯುತ್ತಿದೆ. ಪಾಪ ಮತ್ತು ಪುಣ್ಯಗಳನ್ನು ಎರಡನ್ನು ಸೇರಿಸಿ 'ಕರ್ಮ' ಎಂದು ಹೇಳುತ್ತಿದ್ದೇವೆ. ನಿನ್ನ ಕಾರ್ಯಗಳಿಂದ ಪಾಪಕರ್ಮವೇ ಹೆಚ್ಚಾಗಿ ಬಂದಿದೆಯೆಂದು. ಬಂದಿರುವ ಕರ್ಮ ನಿನ್ನ ತಲೆಯಲ್ಲಿನ ಕರ್ಮಚಕ್ರದಲ್ಲಿ ನಮೂದಿಸಲಾಗಿ ನಿಂತುಹೋಗುತ್ತಿದೆ. ಈ ಜೀವನದಲ್ಲಿ ಬಂದಿರುವ ಕರ್ಮ ನಂತರ ಜನ್ಮಗಳಲ್ಲಿ ಅನುಭವಕ್ಕೆ ಬರುತ್ತದೆ. ಆದ್ದರಿಂದ ಈಗ ನಾವು ಹೇಳಿದರೂ ಯಾರಿಗೂ ಅರ್ಥ ಆಗುವುದಿಲ್ಲ.

ನೀನು ಮಾಡಿದ ಪಾಪಗಳು ನಿನಗೆ ಅರ್ಥವಾಗುವುದಕ್ಕೆ ಎರಡು ಅಥವಾ ಮೂರು ಸಂಘಟನೆಗಳನ್ನು ವಿವರಿಸುತ್ತೇನೆ ನೋಡು. ನೀನು ರಾಜಕೀಯದಲ್ಲಿ ಅತ್ಯುನ್ನತ ಮಟ್ಟಕ್ಕೆ ಸೇರಬೇಕೆಂದುಕೊಂಡಿರುವೆ. ಅದಕ್ಕಾಗಿ ಎಷ್ಟೋ ಮಾಡಬಾರದ ಕೆಲಸಗಳನ್ನು ಮಾಡಿದ್ದೀಯಾ. ಪ್ರಪಂಚ ಸಂಬಂಧ ಪಾಪಗಳನ್ನು ಮಾಡಿದರೆ ಅವು ಒಂದುಸಲ ಅನುಭವಿಸಿದರೆ ಮುಗಿದುಹೋಗುತ್ತದೆ. ಅಥವಾ ದೇವರನ್ನು ಆಶ್ರಯಿಸಿದರೂ, ದೈವಜ್ಞಾನವನ್ನು ಆಶ್ರಯಿಸಿದರೂ ಆ ಪಾಪಗಳನ್ನು ಅನುಭವಿಸದೇ ಕ್ಷಮಿಸಲ್ಪಡುತ್ತದೆ. ಆದರೆ ದೇವರಿಗಾಗಲಿ, ಜ್ಞಾನಕ್ಕಾಗಲಿ ವಿರುದ್ಧವಾಗಿ ಮಾಡಿದ ಪಾಪಗಳು ಒಂದುಸಲ ಅನುಭವಿಸಿದರೂ ಮುಗಿಯುವುದಿಲ್ಲ. ಅವು ನಿತ್ಯವು ಪಾಪಗಳಾಗಿ ಸಜೀವವಾಗಿ ಎರಡು ಯುಗಗಳ ಪರ್ಯಂತವು ಅನುಭವಕ್ಕೆ ಬರುತ್ತಲೇ ಇರುತ್ತವೆ. ಅಂತಹ ಪಾಪಗಳು ದೇವರಿಂದಾಗಲಿ, ದೇವರ ಜ್ಞಾನವನ್ನು ತಿಳಿಯುವುದರಿಂದಾಗಲಿ (ಆಶ್ರಯಿಸುವುದರಿಂದಾಗಲಿ) ಕ್ಷಮಿಸಲ್ಪಡುವುದಿಲ್ಲ. ಅವುಗಳನ್ನು 'ಕ್ಷಮಿಸಲ್ಪಡದ ಪಾಪಗಳು' ಎಂದು ಕರೆಯುತ್ತೇವೆ. ನೀನು ನಿನ್ನ ಜೀವನದಲ್ಲಿ ಅಂತಹ ಕ್ಷಮಿಸಲ್ಪಡದ ಪಾಪಗಳನ್ನು ಮಾಡಿದ್ದೀಯಾ. ನಾನು ಈಗ ನಿನಗೆ ಲೇಖ ಬರೆಯುವುದರ ಮೂಲಕವಾದರೂ ಇನ್ನು ಅಂತಹ ಕಾರ್ಯಗಳನ್ನು ಮಾಡದಂತೆ ಬದಲಾವಣೆ ಹೊಂದುತ್ತಿಯ ಎಂದುಕೊಳ್ಳುತ್ತಿದ್ದೇನೆ.

ಜೀವನದಲ್ಲಿ ದೈವಜ್ಞಾನದ ಮೇಲೆ ದೃಷ್ಠಿ ಹೊರತು ಪ್ರಪಂಚ ಜ್ಞಾನದ ಮೇಲೆ ಸ್ವಲ್ಪವೂ ಧ್ಯಾಸವಿಲ್ಲದ ಒಬ್ಬ ಜ್ಞಾನಿ ವಿಷಯದಲ್ಲಿ ನೀನು ನಿನ್ನ ರಾಜಕೀಯ ಸ್ವಾರ್ಥಕ್ಕಾಗಿ ಅನುಚಿತವಾಗಿ ಪ್ರವರ್ತಿಸಿದ್ದೀಯಾ. ದೈವಜ್ಞಾನವನ್ನು ಅನುಸರಿಸುತ್ತಾ, ಇತರರಿಗೂ ಸಹ ದೈವಜ್ಞಾನವನ್ನು ತಿಳಿಸುತ್ತಾ ಪ್ರಜೆಗಳೆಲ್ಲರನ್ನು ದೈವಜ್ಞಾನಿಗಳನ್ನಾಗಿ ಮಾರ್ಪಡಿಸಬೇಕೆಂದು ನಿತ್ಯ ಪ್ರಯತ್ನ ಮಾಡುವ ಒಬ್ಬ ಜ್ಞಾನಿಯನ್ನು ನೋಡಿ ನೀನು ಸಹಿಸಲಾರದೆ ಅಸೂಯೆ ಗುಣದಿಂದ ಪ್ರವರ್ತಿಸಿದ್ದೀಯಾ. ಆತನ ಹತ್ತಿರಕ್ಕೆ ಎಷ್ಟೋಜನ ಜ್ಞಾನ ಜಿಜ್ಞಾಸಿಗಳು ಜ್ಞಾನವನ್ನು ತಿಳಿಯುವುದಕ್ಕೆ ಬರುತ್ತಿರುವಾಗ, ಅದನ್ನು ನೋಡಿ ಆತನು ಜನರನ್ನು ಆಕರ್ಷಿಸುತ್ತಿದ್ದಾನೆಂದು, ಆತನು ಸಹ ತನ್ನಂತೆ ರಾಜಕೀಯದಲ್ಲಿ ಬೆಳೆಯಬೇಕೆಂದುಕೊಂಡಿದ್ದಾನೆಂದು

ಅನವಶ್ಯವಾಗಿ ಊಹಿಸಿಕೊಂಡಿದ್ದೀಯಾ. ಆತನ ಹತ್ತಿರಕ್ಕೆ ಪ್ರಜೆಗಳು ಜ್ಞಾನವನ್ನು ತಿಳಿಯುವುದಕ್ಕೆ ಮಾತ್ರವೆ ಬರುತ್ತಿದ್ದಾರೆಂದು ತಿಳಿದುಕೊಳ್ಳದೆ ತನ್ನಂತೆ ರಾಜಕೀಯದಲ್ಲಿ ಹೋಗುವುದಕ್ಕೆ ಆತನನ್ನು ನಾಯಕನಾಗಿ ಮಾಡಿ ಕೊಂಡಿದ್ದಾರೆಂದು ತಿಳಿದುಕೊಂಡಿದ್ದೀಯಾ. ದೈವಜ್ಞಾನವನ್ನು ಹೇಳುವ ಆತನ ಉದ್ದೇಶವನ್ನು ತಿಳಿಯದೆ, ಯಾರ ಚಿಂತೆ ಅವರಿಗೆನ್ನುವಂತೆ ನೀನು ರಾಜಕೀಯದಲ್ಲಿ ನಾಯಕನಾಗಿ ಅಭಿವೃದ್ಧಿ ಆಗಬೇಕೆಂದುಕೊಡಂತೆ ಆತನು ಸಹ ಪ್ರಯತ್ನ ಮಾಡುತ್ತಿದ್ದಾನೆಂದು, ಆ ಪ್ರಯತ್ನದಲ್ಲಿ ಭಾಗವಾಗಿಯೇ ಜನರನ್ನು ಸಮೀಕರಿಸುತ್ತಿದ್ದಾನೆಂದು, ಆದ್ದರಿಂದಲೇ ನನ್ನ ಹತ್ತಿರಕ್ಕೆ ಬರದಷ್ಟು ಜನ ಆತನ ಹತ್ತಿರಕ್ಕೆ ಹೋಗುತ್ತಿದ್ದಾರೆಂದು ಅಂದುಕೊಳ್ಳುವುದು ನಡೆದಿದೆ. “ಚೊರರಿಗೆ ಚೊರರ ಚಿಂತೆ, ವ್ಯಭಿಚಾರರಿಗೆ ವ್ಯಭಿಚಾರಚಿಂತೆ” ಎನ್ನುವಂತೆ ನೀನು ರಾಜಕೀಯದಲ್ಲಿ ಚಿಂತೆ ಮಾಡುತ್ತಾ ನಿನ್ನಂತೆ ಉಳಿದವರನ್ನು ಊಹಿಸಿ ಕೊಂಡಿದ್ದೀಯಾ. ದೇವರಜ್ಞಾನಕ್ಕಾಗಿ ಒಂದುಕಡೆ ಸೇರುವ ಪ್ರಜೆಗಳನ್ನು ‘ರಾಜಕೀಯಕ್ಕಾಗಿ’ ಎಂದು ನಿನ್ನ ಚಿಂತೆ ಪ್ರಕಾರ ಅಂದುಕೊಂಡಿದ್ದೀಯಾ.

ಮನುಷ್ಯ ಒಂದುಸಲ ತಪ್ಪು ಆಲೋಚನೆಯಲ್ಲಿ ಬಿದ್ದ ನಂತರ ತನ್ನ ಆಲೋಚನೆ ಸಕ್ರಮವಾದುದೆಂದು ತಿಳಿದುಕೊಳ್ಳುತ್ತಿರುತ್ತಾನೆ. ಹಾಗಿರುವಾಗ ಇತರರು ಒಳ್ಳೆಯದು ಹೇಳಿದರೂ ಅದನ್ನು ಯಾರೂ ಗ್ರಹಿಸುವುದಿಲ್ಲ. ಎಲ್ಲಾ ವಿಧಗಳಲ್ಲಿ ತಮ್ಮ ನಿರ್ಣಯವೇ ಸತ್ಯವಾದುದೆಂದು ತಿಳಿದುಕೊಳ್ಳುತ್ತಾರೆ. ನೀನು ಹಾಗೆ ಬದಲಾಗಿಹೋಗಿದ್ದೀಯಾ. ನಿನ್ನ ಒಳ್ಳೆಯದನ್ನು ಬಯಸುವವರು ನಿನ್ನ ಆಲೋಚನೆ ಸರಿಯಾದುದು ಅಲ್ಲವೆಂದು ಜ್ಞಾನವನ್ನು ಬೋಧಿಸುವ ವ್ಯಕ್ತಿಯನ್ನು ರಾಜಕೀಯ ವ್ಯಕ್ತಿಯಾಗಿ ತಿಳಿದುಕೊಳ್ಳುವುದು ತಪ್ಪೆಂದು ಹೇಳಿದರೂ ನೀನು ಅವರ ಮಾತುಗಳನ್ನು ಕೇಳಲಿಲ್ಲ. ರಾಜಕೀಯ ಇಲ್ಲದ್ದು ಅಷ್ಟುಜನ ಪ್ರತಿದಿನ ಏಕೆ ಆತನ ಹತ್ತಿರಕ್ಕೆ ಹೋಗುತ್ತಾರೆ? ಎಂದು ಅಂದುಕೊಳ್ಳುತ್ತಿದ್ದೆ. ಹೀಗೆ ಒಬ್ಬ ದೈವಜ್ಞಾನಿ ಮೇಲೆ ದುರಾಲೋಚನೆಯನ್ನು ಬೆಳೆಸಿಕೊಂಡ ನೀನು ಸ್ವಲ್ಪವೂ ಹಿಂದೆ ಮುಂದೆ ಆಲೋಚಿಸದಂತೆ ಜ್ಞಾನವನ್ನು ಬೋಧಿಸುವ ಆತನಮೇಲೆ ಕೆಟ್ಟ ಆಲೋಚನೆಗಳನ್ನು ಮಾಡುವುದನ್ನು ಮೊದಲುಮಾಡಿದ್ದೀಯಾ. ಅಸೂಯೆ

ಗುಣದಿಂದ ಜ್ಞಾನಿಯನ್ನು ಹೇಗೆ ಪೆಟ್ಟು ನೀಡಬೇಕು! ಎಂದು ನೋಡಿದ್ದೀಯಾ. ಮೇಲ್ನೋಟಕ್ಕೆ ಏನು ತಿಳಿಯದವನಾಗಿ, ಏನು ಮಾಡದವನಾಗಿ ನಟಿಸುತ್ತಾ ಒಳೊಳಗೆ ಜ್ಞಾನಿಮೇಲೆ ಕಪಟಗಳು ಕುತಂತ್ರಗಳು ಮಾಡುವುದು ಮೊದಲು ಮಾಡಿದ್ದೀಯಾ. ಯಾರಿಗೂ ಯಾವ ಅನುಮಾನ ಬಾರದಂತೆ ನಿನ್ನ ನೀಚ ಕ್ರಿಯೆಗಳು ಮಾಡಲು ಪ್ರಾರಂಭಿಸಿದ್ದೀಯಾ. ಯಾರಿಗೂ ತಿಳಿಯದಂತೆ ಮಾಡಿದ ಕೆಲಸಗಳು ನಿನಗೆ ಹೇಗೆ ತಿಳಿದಿವೆ? ಎಂದು ನಿನಗೆ ಪ್ರಶ್ನೆ ಬರಬಹುದು. "ರಹಸ್ಯವಾಗಿ ಗಮನಿಸುತ್ತಾ ಅವರ ಹತ್ತಿರವೇ ನಾನಿದ್ದೀನೆಂದು ಬಹಳಜನರಿಗೆ ತಿಳಿದಿಲ್ಲ. ಯಾರಿಗೂ ತಿಳಿಯದಂತೆ ಅವರತ್ತಿರವೇ ಕಾಲ ಕಳೆಯುತ್ತಿದ್ದೇನೆ" ಆದುದರಿಂದ ನಿನ್ನೊಬ್ಬನ ವಿಷಯವೇ ಅಲ್ಲ, ಬಹಳಜನರ ರಹಸ್ಯಗಳು ನನಗೆ ಚೆನ್ನಾಗಿ ತಿಳಿಯುತ್ತದೆ.

ನಿನ್ನ ಹತ್ತಿರಕ್ಕಿಂತ ಹೆಚ್ಚಿನ ಜನರು ಯಾರ ಹತ್ತಿರಕ್ಕೆ ಸೇರುತ್ತಿದ್ದಾರೊ ಆ ವ್ಯಕ್ತಿ ನಿನಗೆ ರಾಜಕೀಯ ಪ್ರತ್ಯರ್ಥಿಯಾಗಿ ಬರುತ್ತಾನೆಂದು, ಆತನು ರಾಜಕೀಯದಲ್ಲಿ ಇದ್ದರೆ ಆತನ ಮುಂದೆ ನಾನು ನಿಲ್ಲಲಾರೆಯೆಂದು ತಿಳಿದ ನೀನು, ಆತನನ್ನು ಯಾವುದೋ ಒಂದು ವಿಧವಾಗಿ ಪೆಟ್ಟುನೀಡಿ ಆತನು ನಿನ್ನ ಊರಿನಲ್ಲಿಯೇ ಇಲ್ಲದಂತೆ ಹೋಗುವಹಾಗೆ ಮಾಡಬೇಕೆಂದುಕೊಂಡಿದ್ದೀಯಾ. ನೀನಿರುವಕಡೆ ಆತನು ಇಲ್ಲದಂತೆ ಹೋದರೆ ರಾಜಕೀಯವಾಗಿ ನೀನು ಸುಲಭವಾಗಿ ಮುಂದುವರಿಯಬಹುದೆಂದು ತಿಳಿದುಕೊಂಡಿದ್ದೀಯಾ. ಅದಕ್ಕೆ ಬೇಕಾದ ಪ್ರಯತ್ನಗಳೆಲ್ಲವೂ ಮಾಡಿದ್ದೀಯಾ. ಇತರೆ ಚಿಲ್ಲರೆ ಮನುಷ್ಯರನ್ನು, ರೌಡಿಗಳನ್ನು ಪ್ರೇರೆಪಿಸಿ ಜ್ಞಾನಿಯನ್ನು ಹೊಡೆದೋಡಿಸಲು ನೋಡಿದ್ದೀಯಾ. ದೈವಜ್ಞಾನ ತಿಳಿದವರು ಸೂಕ್ಷ್ಮಗ್ರಾಹಿಗಳಾದ್ದರಿಂದ ನಿನ್ನ ಕಪಟಗಳನ್ನು ಕುತಂತ್ರ ಗಳನ್ನು ಅಲ್ಲಿ ನಿನ್ನ ಊರಿನಲ್ಲಿಯೇ ಇರುವ ಜ್ಞಾನಿ ಗ್ರಹಿಸಿದ್ದಾನೆ. ನಿನ್ನ ತಿಳುವಳಿಕೆ ಇಲ್ಲದ ಆಲೋಚನೆಗಳಿಗೆ, ಅಸೂಯೆ ಪೂರಿತ ಕಾರ್ಯಗಳಿಗೆ ದೂರವಾಗಿ ಇರಬೇಕೆಂದು ತಿಳಿದುಕೊಂಡಿದ್ದಾನೆ. ದೈವಜ್ಞಾನವನ್ನು ಕೋರುವವರು ಎಲ್ಲಿದ್ದರೂ ಒಂದೇ ಎನ್ನುವ ಉದ್ದೇಶದಿಂದ ಆತನು ನಿನ್ನ ಗ್ರಾಮವನ್ನು ಬಿಟ್ಟು ಸುಮಾರು ಎರಡುನೂರು ಮೈಲಿಗಳ ದೂರಹೋಗಿ ನಿವಾಸ ಏರ್ಪಡಿಸಿಕೊಂಡಿದ್ದಾನೆ.

ಅಲ್ಲಿಯೂ ಸಹ ಆತನು ಪ್ರಜೆಗಳಿಗೆ ಜ್ಞಾನವನ್ನು ತಿಳಿಸುತ್ತಾ ದೈವಸೇವೆ ಮಾಡಿಕೊಳ್ಳುತ್ತಿದ್ದನು.

ನಿನ್ನ ಸ್ಥಾನದಿಂದ ಜ್ಞಾನಿಯಾದ ಆತನು ದೂರವಾಗಿ ಹೋಗುವುದು ನಿನಗೆ ಸಂತೋಷವನ್ನು ಉಂಟುಮಾಡಿದೆ. ರಾಜಕೀಯದಲ್ಲಿ ಸುಲಭವಾಗಿ ಬೆಳವಣಿಗೆಯಾಗಬಹುದೆಂದು ಅಂದುಕೊಂಡಿದ್ದೀಯಾ. ಹಾಗೆಯೇ ಮುಂದುವರಿದಿದ್ದೀಯಾ. ಆದರೆ ಜ್ಞಾನವನ್ನು ಬೋಧಿಸುವ ಜ್ಞಾನಿ ಅಲ್ಲಿದ್ದರೂ ನೀನು ರಾಜಕೀಯವಾಗಿ ಮುಂದುವರಿಯುವವನೆ! ಅನವಶ್ಯವಾಗಿ ನಿನ್ನ ಅನುಮಾನ ದೊಡ್ಡಭೂತವಾಗಿ ನಿನ್ನನ್ನು ಕೆಟ್ಟ ದಾರಿಯಲ್ಲಿ ನಡೆಸಿದೆ. ಒಬ್ಬ ದೈವಜ್ಞಾನಿ ಮೇಲೆ ಕುತಂತ್ರಗಳು ಮಾಡುವುದರಿಂದ, ಆತನನ್ನು ಅನವಶ್ಯವಾಗಿ ಸ್ಥಾನಭಂಗ ಮಾಡುವುದರಿಂದ, ಆ ಪ್ರಾಂತದಲ್ಲಿ ಜ್ಞಾನ ತಿಳಿಯುವ ಜಿಜ್ಞಾಸಿಗಳೆಲ್ಲರಿಗೂ ನಿನ್ನ ಕಾರ್ಯಚಟುವಟಿಕೆಗಳಿಂದ ಜ್ಞಾನ ತಿಳಿಯದಿರುವುದರಿಂದ, ಹೀಗೆ ಜ್ಞಾನದ ವಿಷಯದಲ್ಲಿ ಮಾಡಿದ ಕೆಟ್ಟ ಪ್ರಯತ್ನದಿಂದ ನಿನಗೆ ಪಾಪ ಕಾಣಿಸದ ಫಲಿತವಾಗಿ ಬಂದಿದೆ. ಹಾಗೆ ಬಂದಿರುವ ಪಾಪ ದೇವರ ಜ್ಞಾನ ವಿಷಯದಲ್ಲಿನದು ಆಗಿರುವುದರಿಂದ ಅದು ಕ್ಷಮಿಸಲಾರದ ಪಾಪವಾಗಿ ಬದಲಾಗಿದೆ. ನೀನು ರಾಜಕೀಯವಾಗಿ ಈ ಜನ್ಮದಲ್ಲಿ ಮಾತ್ರ ಲಾಭ ಪಡೆಯುತ್ತೀಯಾ. ಆದರೆ ಬಂದಿರುವ ಪಾಪದಿಂದ ಎರಡು ಯುಗಗಳ ಪರ್ಯಂತವು ಆ ಪಾಪವನ್ನು ಅನುಭವಿಸಬೇಕಾಗಿರುತ್ತದೆ. ಸಣ್ಣ ಲಾಭಕ್ಕಾಗಿ ದೊಡ್ಡ ನಷ್ಟವನ್ನು ತಂದುಕೊಂಡಿದ್ದೀಯಾ. ಒಂದು ರೂಪಾಯಿಗೋಸ್ಕರ ಆಸೆಪಟ್ಟು ನೂರುಕೋಟಿ ಸಾಲ ಮಾಡುವುದು ಹೇಗಿರುತ್ತದೊ ಹಾಗೆ ಈಗ ನೀನು ಮಾಡಿದ ಕೆಲಸವಿದೆಯೆಂದು ಹೇಳುತ್ತಿದ್ದೇವೆ.

ಈಗ ಸುಮಾರು ನಿನ್ನ ವಯಸ್ಸು ಐವತ್ತು ವರ್ಷಗಳ ಮೇಲೆ ಆರವತ್ತು ವರ್ಷಗಳ ಒಳಗಿದೆ. ಇಷ್ಟುಕಾಲದಿಂದ ಎಷ್ಟೋ ನೀಚವಾದ ಆಲೋಚನೆಗಳನ್ನು ಮಾಡುತ್ತಾ, ಎಷ್ಟೋ ಜನರನ್ನು ಪರೋಕ್ಷವಾಗಿ ನಷ್ಟಪಡಿಸುತ್ತಾ, ಪ್ರತ್ಯಕ್ಷವಾಗಿ ಚೆನ್ನಾಗಿ ಕಾಣಿಸಿದರೂ ಕಾಣಿಸದಂತೆ ಗುಂಡಿಗಳು ತೋಡುತ್ತಾ, ಒಳಗೊಂದು ಹೊರಗೆ ಮತ್ತೊಂದಾಗಿ ಮಾತನಾಡುತ್ತಾ, ಎಷ್ಟೋ ಕೆಟ್ಟ ಕಾರ್ಯಗಳು ಮಾಡುತ್ತಾ,

ಮೇಲ್ನೋಟಕ್ಕೆ ಒಳ್ಳೆಯದಾಗಿ ಕಾಣಿಸುತ್ತಾ ಬಂದಿರುವುದಕ್ಕೆ ಇಷ್ಟುಕಾಲಕ್ಕೆ ರಾಜಕೀಯವಾಗಿ ಮುಂದುವರಿದು ಅಧಿಕಾರ ಪಾರ್ಟಿಯಲ್ಲಿ ದೊಡ್ಡ ಗೌರವಪ್ರದ ಪದವಿಯನ್ನು ನೀನು ಹೊಂದಿದ್ದೀಯಾ. ಅದು ಎಷ್ಟುಕಾಲ ಇರುತ್ತದೊ ಯಾರಿಗೂ ತಿಳಿದಿಲ್ಲ. ಈ ಐದು ವರ್ಷಗಳ ಪದವಿಯಲ್ಲಿ ಇದ್ದು ನಂತರ ಇಳಿದುಹೋಗ ಬಹುದು ಅಥವಾ ನಿನ್ನ ಅದೃಷ್ಟ ಚೆನ್ನಾಗಿದ್ದರೆ ಎರಡನೆ ಸಲವೂ ಸಹ ನೀನೆ ಗೆದ್ದು ನಿನ್ನ ಪಾರ್ಟಿಯೇ ಅಧಿಕಾರದಲ್ಲಿದ್ದು, ನೀನು ಮುಖ್ಯಮಂತ್ರಿ ಪದವಿಯನ್ನೇ ಪಡೆಯಬಹುದು ಎಂದುಕೊ. ಅದು ಎಷ್ಟುಕಾಲ ಇರುತ್ತದೊ ಯಾರಿಗೂ ತಿಳಿದಿಲ್ಲ. ಆದುದರಿಂದ ನಾನು ನಿಮ್ಮಂತವರಿಗೆಲ್ಲ ತಿಳಿಯುವಂತೆ ಒಂದು ವಾಕ್ಯವನ್ನು ಬರೆದಿದ್ದೇನೆ. ಅದು **"ನಿನ್ನ ಉದ್ಯೋಗ, ನಿನ್ನ ಘನತೆ, ನಿನ್ನ ಅಧಿಕಾರ, ನಿನ್ನ ಧನ, ನಿನ್ನ ಕೀರ್ತಿ ಸ್ವಲ್ಪಕಾಲ ಇರುವುದೇ, ನಿನ್ನ ಶರೀರವೂ ಕೂಡ ನಿನ್ನ ಮಾತು ಕೇಳದ ದಿನವಿದೆ ಜಾಗ್ರತೆ!"** ಎಂದು ಇದೆ.

ನನ್ನ ವಾಕ್ಯವನ್ನು ನೋಡಿದ ಬಹಳಜನ ಅದರಲ್ಲಿನ ಸತ್ಯವನ್ನು ಗ್ರಹಿಸಿ "ನೀವು ಹೇಳಿರುವುದು ನಿಜವೇ! ನಾವು ಹಿಂದೆ ಮುಂದೆ ನೋಡದಂತೆ ಇಷ್ಟುಕಾಲ ಬದುಕಿದ್ದೇವೆ. ಈಗ ನಾವು ಮಾಡಿದ ತಪ್ಪು ನಮಗೆ ಅರ್ಥವಾಗುತ್ತಿದೆ. ನಾವು ಕಾಲವನ್ನು ಇಲ್ಲಿಯವರೆಗು ವ್ಯರ್ಥವಾಗಿ ಕಳೆದಿದ್ದೇವೆ. ಈಗ ನಿಮ್ಮ ವಾಕ್ಯವನ್ನು ನೋಡಿ ಎಚ್ಚರಗೊಂಡಿದ್ದೇವೆ. ಈಗ ಏನು ಮಾಡಬೇಕು? ನಮ್ಮ ಕರ್ತವ್ಯವೇನು? ಬಾವಿಯಲ್ಲಿನ ಕಪ್ಪೆಯಂತೆ ಕಾಣಿಸುವುದೇ ಜೀವನ. ಕಾಣಿಸದಿರುವುದು ಏನು ಇಲ್ಲವೆಂದುಕೊಂಡಿದ್ದೆವು. ಈಗ ಕಾಣಿಸದ ಕರ್ಮ ನಮ್ಮನ್ನು ಬಿಡುವುದಿಲ್ಲವೆಂದು ತಿಳಿಯುವುದರಿಂದ ನಾವು ಜಾಗ್ರತೆಯಾಗಿದ್ದೇವೆ. ನೀವು ಹೇಳಿದಂತೆ ನಡೆಯುತ್ತೇವೆ" ಎಂದು ಹೇಳಿಕೊಳ್ಳುವುದು ನಡೆದಿದೆ. ಮನಸ್ಸಿನಲ್ಲಿ ಬದಲಾವಣೆ ಬಂದವರಿಗೆಲ್ಲ ಹೇಳುವ ಸಲಹೆ ಒಂದೇ. ನೀನು ಜೀವಿಸುವ ಕಾಲ ಕಡಿಮೆಯಿದೆ. ಈಗಲಿಂದಾ ದರೂ ದೈವಜ್ಞಾನವನ್ನು ತಿಳಿದುಕೊ (time is short do it now)

ನನ್ನ ಸಲಹೆ ಕೆಲವರಿಗೆ ಮಾತ್ರ ಇಷ್ಟವಾಗಿದೆ ಆದರೆ ಎಲ್ಲರಿಗೂ ಇಷ್ಟವಾಗಿದೆಯೆಂದು ಹೇಳಲಾರೆವು. ಕೆಲಸಕಾರ್ಯ ಇಲ್ಲದವರು, ಸೋಂಬೇರಿ

ಗಳು, ಬದುಕಲಾರದ ಪ್ರತಿಯೊಬ್ಬನು ಇಂತಹ ಮಾತುಗಳನ್ನು ಹೇಳುತ್ತಿರುತ್ತಾರೆ. ಮಾತುಗಳು ಹೇಳಿ ಬದುಕುತ್ತಿರುತ್ತಾರೆಂದು ಒಳ್ಳೆಯದನ್ನು ಹೇಳುವ ನಮ್ಮನ್ನು ಸಹ ಅವಹೇಳನವಾಗಿ ಮಾತನಾಡುವವರು ಇದ್ದಾರೆ. ಅಂತಹವರಿಗೆ ನಾವು ಹೇಳುವ ಮಾತುಗಳು ರುಚಿಸುವುದಿಲ್ಲ. ನೀವೂ ಸಹ ಪ್ರಸ್ತುತಕ್ಕೆ ಅದೇ ದಾರಿಯಲ್ಲಿದ್ದೀರಿ. ಜೀವನದಲ್ಲಿ ಮುಖ್ಯವಾದುದು, ಜೀವನಕ್ಕೆ ಸಾರಾಂಶ ವಾದುದಾದ ದೈವಜ್ಞಾನವನ್ನು ಹೇಳಿದರೆ, ನೀನು ಅನೇಕಸಲ ಕಿವಿಕೊಡದೆ, ಹೇಳಿದವರನ್ನೇ ಹೇಳನಮಾಡಿ ಕಳಿಸಿದ್ದೀಯಾ. "ರೋಗ ಇರುವವನಿಗೆ ವೈದ್ಯ ಅಗತ್ಯ" ಎನ್ನುವಂತೆ ಅಜ್ಞಾನದಿಂದಕೂಡಿಕೊಂಡು ಒಳ್ಳೆಯದರ ಬೆಲೆಯನ್ನು, ಜ್ಞಾನವೊಂದರ ಔನ್ನತ್ಯವನ್ನು ತಿಳಿಯದ ನಿನಗೆ ನಾವು ಮತ್ತೊಂದುಸಲ ಜ್ಞಾನವನ್ನು ಕೇಳುವ ಅವಕಾಶವನ್ನು ಒದಗಿಸಿದ್ದೇವೆ. ಈ ಸಲ ನಾನು ನೀನು ಮಾಡಿದ ಪಾಪಗಳನ್ನೇ ವಿವರಿಸುತ್ತೇನೆ. ಅದರಿಂದ ಪಾಪಭೀತಿ ಉಂಟಾದರೆ ಇವತ್ತಿಗಾದರೂ ನೀನು ಕರ್ಮಗಳಿಂದ ಹೊರಬೀಳುತ್ತೀಯಾ. ಇಲ್ಲಿಯವರೆಗು ಮೊದಲು ನೀನು ಒಬ್ಬ ಜ್ಞಾನಿ ಕುರಿತು ಮಾಡಿದ ಪಾಪವನ್ನು ಹೇಳಿದ್ದೇನೆ. ಈಗ ಅಂತಹದ್ದೆ ಮತ್ತೊಂದು ಹೇಳುತ್ತೇನೆ. ಇದನ್ನು ಕೇಳಿದ ನಂತರ ನೀನು ಪಾಪಭೀತಿಯನ್ನು ಹೊಂದದಿದ್ದರೆ ನಿನ್ನನ್ನು ಒಳ್ಳೆಯವನನ್ನಾಗಿ ಮಾಡುವವರು ಯಾರೂ ಇರುವುದಿಲ್ಲ. ಬುದ್ಧಿ ಪ್ರತಿ ಮನುಷ್ಯನಿಗು ಇರುತ್ತದೆ. ಆದರೆ ಆ ಬುದ್ಧಿಯನ್ನು ಬೇರೆಬೇರೆ ಪ್ರಪಂಚ ವಿಷಯಗಳ ಮೇಲೆ ಉಪಯೋಗಿಸುವ ನೀನು ಈಗ ನಾನು ಹೇಳುವ ವಿಷಯದ ಮೇಲೆ ಉಪಯೋಗಿಸಿ, ನನ್ನ ಉದ್ದೇಶವನ್ನು ತಿಳಿಯಬೇಕೆಂದು ಹೇಳುತ್ತಿದ್ದೇನೆ.

ಗತಕಾಲದಲ್ಲಿ ಒಂದುಸಲ ನಿನ್ನ ರಾಜಕೀಯ ಪ್ರಯೋಜನೆಗಳಿಗೋಸ್ಕರ ಜ್ಞಾನಬೋಧನೆ ಮಾಡುವ ವ್ಯಕ್ತಿಯನ್ನು ಊರು ಬಿಟ್ಟುಹೋಗುವಂತೆ ಕಪಟ ಕುತಂತ್ರಗಳು ಮಾಡಿದ್ದೀಯಾ. ನಂತರ ಸ್ವಲ್ಪ ಕಾಲಕ್ಕೆ ರಾಜಕೀಯದಲ್ಲಿ ನೀನಿರುವ ಪಾರ್ಟಿ ಹಿರಿಯರು ನಿನ್ನನ್ನು ತಮ್ಮ ಪಾರ್ಟಿಯಲ್ಲಿ ಒಬ್ಬ ನಾಯಕನಾಗಿ ಪ್ರಕಟಿಸಿದ್ದಾರೆ. ಎಲೆಕ್ಷನ್‌ಗಳ ಸಮಯದಲ್ಲಿ ಪೋಟಿ ಮಾಡುವುದಕ್ಕೆ ಅರ್ಹತೆ ಪತ್ರವಾದ 'ಬಿ' ಫಾರಂ ಅನ್ನು ಸಹ ಕೊಟ್ಟಿದ್ದಾರೆ. ಅದರಿಂದ ಎಲೆಕ್ಷನ್‌ನಲ್ಲಿ

ಪೋಟಿ ಮಾಡಿದ್ದೀಯಾ. ನೀನು ಇರುವ ಊರಿನಲ್ಲಿ ಒಂದು ಆಶ್ರಮವೂ ಸಹ ಇದೆ. ಆ ಆಶ್ರಮದಲ್ಲಿ ಅನ್ನಾರ್ಥರಾಗಿ ಬಂದವರಿಗು ಜ್ಞಾನಾರ್ಥರಾಗಿ ಬಂದವರಿಗು, ಎಲ್ಲಿಯೂ ಅನುಕೂಲವಿಲ್ಲದೆ ಅಲ್ಲಿಗೆ ಬಂದು ಆಶ್ರಯ ಹೊಂದಿದವರಿಗೆ ನಿತ್ಯ ಅನ್ನದಾನ ಮಾಡುವುದು ರೂಢಿಯಾಗಿದೆ. ಒಂದುದಿನ, ಎರಡು ದಿನಗಳು ಎಂದು ಅಲ್ಲದೆ ಎಲ್ಲಕಾಲದಲ್ಲಿ ಹಸಿವಿಗೊಂಡವರಿಗೆ ಅನ್ನ ಇಡುವ ಕಾರ್ಯ ನಿತ್ಯವು ನಡೆಯುತ್ತಿತ್ತು. ಎಷ್ಟೋ ವರ್ಷಗಳಿಂದ ಹಾಗೆ ಅನ್ನಧಾನ ಮಾಡುವುದು ನಡೆಯುತ್ತಿತ್ತು. ಆದರೆ ನಿನ್ನ ಎಲೆಕ್ಷನ್ ದಿನ ಎರಡು ನೂರುಜನ ಹೊಸಬರು ಆಶ್ರಮಕ್ಕೆ ಹೋಗಿ ಊಟವನ್ನು ಕೇಳುವುದು ನಡೆದಿದೆ. ಅ ದಿನ ಎಲೆಕ್ಷನ್ ನಡೆಯುತ್ತಿರುವುದರಿಂದ, ಊರಿನಲ್ಲಿನ ಎಲ್ಲಾ ಹೋಟಲ್, ಎಲ್ಲಾ ಲಾಡ್ಜ್‌ಗಳು ತುಂಬಿಹೋಗಿರುವುದರಿಂದ, ಒಂದುದಿನ ಇರುವುದಕ್ಕೆ ಆಶ್ರಯ, ಅನ್ನ ಕೇಳಿದ್ದಾರೆ.

ಎಷ್ಟೋ ವರ್ಷಗಳಿಂದ ಅನ್ನದಾನ ಮಾಡುವ ಆಶ್ರಮ ಆಗಿರುವುದರಿಂದ ಆಶ್ರಮಾಧಿಪತಿ ಅಷ್ಟುಜನರಿಗೆ ಉಚಿತವಾಗಿ ಅನ್ನ ಇಡುತ್ತೇವೆಂದು ಹೇಳಿ ಆಶ್ರಯಕೊಡಲಾಗಿದೆ. ಹಾಗೆ ಆಶ್ರಯ ಹೊಂದಿದವರೆಲ್ಲರೂ ಇತರ ರಾಜಕೀಯ ಪಾರ್ಟಿಯವರೆಂದು ನೀನು ತಿಳಿದುಕೊಳ್ಳುವುದಾಗಿದೆ. ಆಶ್ರಮಾಧಿಪತಿಯಾದ ಸ್ವಾಮೀಜಿಯೇ ನಿನಗೆ ವಿರೋಧವಾಗಿ ಎಲ್ಲಿಯೋ ಇರುವವರನ್ನು ತಂದು ತನ್ನ ಆಶ್ರಮದಲ್ಲಿ ಇಟ್ಟುಕೊಂಡು, ಅವರಿಂದ ಕಳ್ಳ ಓಟುಗಳನ್ನು ನಿನಗೆ ವಿರೋಧವಾಗಿ ಹಾಕಿಸಬೇಕೆಂದು ಅಂದುಕೊಂಡಿದ್ದಾನೆಂದು ನೀನು ಅಂದು ಕೊಳ್ಳುವುದು ನಡೆದಿದೆ. ಆಶ್ರಮಾಧಿ ಪತಿಯಾದ ಸ್ವಾಮೀಜಿ ಎಂತಹ ರಾಜಕೀಯದೊಂದಿಗೆ ಸಂಬಂಧ ಇಲ್ಲದಿದ್ದರೂ, ನಿನ್ನ ಮೇಲೆ ಎಂತಹ ದುರುದ್ದೇಶ ಇಲ್ಲದಿದ್ದರೂ, ನೀವು ಮಾತ್ರ ಸ್ವಾಮೀಜಿಯನ್ನು ಕೆಟ್ಟದಾಗಿ ತಿಳಿದುಕೊಳ್ಳುವುದು ನಡೆದಿದೆ. ನೀನು ರಾಜಕೀಯದಲ್ಲಿದ್ದು ಎಷ್ಟೋ ನೀಚಕೀಯ ಗಳು ಮಾಡುತ್ತಾ, ಅದನ್ನೇ ರಾಜಕೀಯ ಎಂದುಕೊಳ್ಳುವ ನೀನು ಒಂದು ಆಶ್ರಮವನ್ನು ಸ್ಥಾಪಿಸಿ ಹಸಿವಿಗೆ ಅನ್ನ, ಬುದ್ಧಿಗೆ ಜ್ಞಾನವನ್ನು ಹೇಳುತ್ತಾ ಯಾವಾಗಲೂ ದೈವಚಿಂತನೆಯಲ್ಲಿ ಇರುವವರನ್ನು ಸಹ ನೀನು ನೀಚವಾಗಿ

ತಿಳಿಯುವುದು, ಅವರನ್ನು ಸಹ ರಾಜಕೀಯ ಪ್ರತ್ಯರ್ಥಿಗಳಾಗಿ ನೀನು ಭಾವಿಸುವುದು ಮಾಡಿದ್ದೀಯಾ. ಅಲ್ಲಿಗೆ ಸುಮ್ಮನಾಗದೆ ಆಶ್ರಮದವರು ಮಾಡುತ್ತಿರುವ ಕೆಲಸವೇನು? ಎಂದು ಆಲೋಚಿಸದಂತೆ ಅವರನ್ನು ಅನೇಕ ತೊಂದರೆಗಳಿಗೆ ಗುರಿಯಾಗುವಂತೆ ಮಾಡುವುದಾಗಿದೆ. ನೀನು ಪ್ರತ್ಯಕ್ಷವಾಗಿ ಏನು ಮಾಡದಿದ್ದರೂ, ನಿನ್ನ ಅನುಚರರೊಂದಿಗೆ ಅಗೌರವವಾಗಿ ಆಶ್ರಮದವರ ಬಗ್ಗೆ ಪ್ರವರ್ತಿಸುವಂತೆ, ಮಾತನಾಡುವಂತೆ ಮಾಡಿದ್ದೀಯಾ. ನಿನ್ನ ಅನುಚರರಿಂದ ಆಶ್ರಮವೊಂದರ ಅಧಿನೇತ ಮನಸ್ತಾಪಕ್ಕೆ ಗುರಿಯಾಗಿದ್ದಾನೆಂದು ತಿಳಿದು ಸಹ ಅದು ನಿನ್ನ ತಪ್ಪೆಂದು ತಿಳಿದುಕೊಳ್ಳಲಿಲ್ಲ. ನಿನ್ನ ರಾಜಕೀಯ ಭವಿಷ್ಯತ್ತಿಗೋಸ್ಕರ ಸಾಧಾರಣ ಮನುಷ್ಯರನ್ನು ಎಷ್ಟೋ ಜನರನ್ನು ತೊಂದರೆಯಲ್ಲಿ ಇಟ್ಟಂತೆ, ಅನ್ನದಾನ ಮಾಡಿರುವುದು ನಿನಗೆ ತಪ್ಪಾಗಿ ಕಾಣಿಸಿ ಅವರನ್ನು ಸಹ ತೊಂದರೆಯಲ್ಲಿ ಇಟ್ಟಿದ್ದೀಯಾ.

ಪ್ರತಿ ಮನುಷ್ಯ ಮಾಡುವ ಪ್ರತಿ ಕೆಲಸಕ್ಕೆ ದೇವರ ಹತ್ತಿರ ಒಂದು ಲೆಕ್ಕ ಇರುತ್ತದೆ. ಅಲ್ಲಿ ಬರೆಯಲ್ಪಟ್ಟ ಲೆಕ್ಕವನ್ನೇ 'ಕರ್ಮ' ಎನ್ನುತ್ತೇವೆ. ತುಚ್ಛವಾದ, ಅಶಾಶ್ವತವಾದ, ಯಾವ ಪವಿತ್ರತೆ ಇಲ್ಲದ ನೀಚರಾಜಕೀಯಕ್ಕಾಗಿ, ದೇವರ ಮಾರ್ಗದಲ್ಲಿರುವ ಸ್ವಾಮೀಜಿಗೆ ಕೀಡು ಮಾಡುವುದರಿಂದ ನೀನು ಕರ್ಮಲೆಕ್ಕದಲ್ಲಿ ಲೆಕ್ಕಿಸಲ್ಪಟ್ಟಿದ್ದೀಯಾ. ಅದು ಸಾಧಾರಣ ಮನುಷ್ಯನ ಬಳಿ ಮಾಡಿದ ತಪ್ಪಲ್ಲ. ಎಷ್ಟೋ ಜ್ಞಾನ ಸಮುಪಾರ್ಜನೆ ಮಾಡಿ, ಜ್ಞಾನಶಕ್ತಿ ಇರುವವರಮೇಲೆ, ನಿತ್ಯ ಅನ್ನದಾನ ಮಾಡುವವರ ಮೇಲೆ ಮಾಡಿದ ತಪ್ಪಿಗೆ, ಅವರಿಗೆ ನಡೆದ ಅಸೌಕರ್ಯಕ್ಕೆ ನೀನು, ನಿನ್ನ ರಾಜಕೀಯವೇ ಜವಾಬ್ದಾರಿ ಆಗಿರುವುದರಿಂದ ನೀನು ಪಾಪವನ್ನು ಮೂಟೆಕಟ್ಟಿಕೊಳ್ಳಬೇಕಾಗಿ ಬಂದಿದೆ. ಒಂದು ಕೆಲಸದಲ್ಲಿ ತಾನು ಮಾಡಿದ ಪಾಪವೆಷ್ಟು? ತಾನು ತಲೆಗೆ ಎತ್ತುಕೊಂಡ ಪಾಪವೆಷ್ಟು ಎಂದು ಯಾರಿಗೂ ತಿಳಿದಿಲ್ಲ. ಹಾಗೆ ಅನ್ನದಾನ ವಿಷಯದಲ್ಲಿ, ಸ್ವಾಮೀಜಿ ಮೇಲೆ ನೀನು ತಿಳಿದ ಭಾವನೆಗೆ ನಿನಗೆ ಕ್ಷಮಿಸಲಾರದ ಪಾಪ ಬಂದಿದೆ. ಕ್ಷಮಿಸಲಾರದ ಪಾಪ ನಿನ್ನ ಜೀವನದಲ್ಲಿ ಎರಡನೆ ಸಲ ಸಂಪಾದಿಸಿಕೊಂಡಿದ್ದೀಯಾ. ಮೊದಲೆ ಒಂದುಸಲ ಸಂಪಾದಿಸಿಕೊಂಡ ಪಾಪವನ್ನು ಅನುಭವಿಸುವುದಕ್ಕೆ ದೈವ ಗ್ರಂಥ ಸಾಕ್ಷಿಯಾಗಿ

ಎರಡು ಯುಗಗಳು ಹಿಡಿಸುತ್ತದೆಂದು ತಿಳಿದಿದೆ. ಎರಡನೆ ಬಾರಿ ಸಂಪಾದಿಸಿ ಕೊಂಡ ಕ್ಷಮಿಸಲಾರದ ಪಾಪದಿಂದ ಮತ್ತೊಂದುಬಾರಿ ನಾಲ್ಕು ಯುಗಗಳ ಪಾಪವು ನಿನ್ನ ತಲೆಯಲ್ಲಿ ಸೇರಿಹೋಗಿದೆ. ಅದು ಇದು ಸೇರಿಸಿಕೊಂಡರೆ ಒಟ್ಟಾರೆ ನಾಲ್ಕು ಯುಗಗಳು ನಿತ್ಯಪಾಪಿಯಾಗಿ ಹೋಗಿದ್ದೀಯಾ. ಒಂದು ಜನ್ಮದಲ್ಲಿನ ಸುಖಕ್ಕಾಗಿ, ಘನತೆಗಾಗಿ ಎರಡು ಯುಗಗಳಲ್ಲಿ ಎಷ್ಟು ಜನ್ಮಗಳೆತ್ತಿ, ಎಷ್ಟು ಕರ್ಮ ಅನುಭವಿಸ ಬೇಕಾಗಿರುತ್ತದೊ, ಇದೆಲ್ಲಾ ದೈವಿಕವಾದ ಪಾಪವೊಂದರ ನಮೂನೆ ಹೇಳಿದ್ದೇನೆ. ಪ್ರಪಂಚ ಸಂಬಂಧವಾದ ಪಾಪ ವಿಷಯವನ್ನು ಕುರಿತು ನೀನು ಮಾಡಿರುವುದನ್ನೇ ವಿವರಿಸುತ್ತೇನೆ ಕೇಳು.

ನಿನ್ನ ತಲೆಯಲ್ಲಿ ಹೆಂಡತಿ ಮಕ್ಕಳ ಮೇಲಿನ ಧ್ಯಾಸಕ್ಕಿಂತ, ರಾಜಕೀಯ ಪದವಿಗಳ ಮೇಲೆ ಧ್ಯಾಸ ಹೆಚ್ಚಾಗಿ ಇರುವುದರಿಂದ, ರಾಜಕೀಯ ಕಾರ್ಯಗಳನ್ನು ಕುರಿತು ಹಿಂದೆ ಮುಂದೆ ನೋಡದಂತೆ ಪಾಪಗಳನ್ನು ಮಾಡಿದ್ದೀಯಾ. ಚುಣಾವಣೆಗಳಲ್ಲಿ ನಿನಗೆ ಮತ ಹಾಕಲಿಲ್ಲವೆಂಬ ಕಕ್ಷದಿಂದ ಒಂದು ಕುಟುಂಬವನ್ನು ಆರ್ಥಿಕವಾಗಿ ತೊಂದರೆಗೀಡಾಗುವಂತೆ ಮಾಡಿದ್ದೀಯಾ. ಮತ ಹಾಕಲಿಲ್ಲವೆನ್ನುವ ನೆಪದಿಂದ ಪೊಲೀಸ್ ಕೇಸುಗಳಲ್ಲಿ ಇರುಕಿಸಿ ಅವರನ್ನು ಅನೇಕ ತೊಂದರೆಗೀಡು ಮಾಡಿದ್ದೀಯಾ. ಅಷ್ಟೇ ಅಲ್ಲದೆ ಆ ಕುಟುಂಬದ ಯಜಮಾನನ್ನು, ಅವರಿಗೆ ಪ್ರತ್ಯರ್ಥಿಗಳಾಗಿ ಇರುವವರನ್ನು ರೊಚ್ಚಗೆಬ್ಬಿಸಿ ಅವರಿಂದ ಹತ್ಯೆ ಮಾಡಿಸಿರುವೆ. ಹತ್ಯೆ ಹಿಂದೆ ನಿನ್ನ ಹಸ್ತವಿರುವಂತೆ ಯಾರಿಗೂ ತಿಳಿಯದಂತೆ ಜಾಗ್ರತೆವಹಿ ಸಿದ್ದೀಯಾ. ಸಮಾಜದಲ್ಲಿ ದುಷ್ಟರಾಗಿರುವವರನ್ನು, ರೌಡಿಗಳಾಗಿರುವವರನ್ನು ಆಶ್ರಯಕೊಟ್ಟು ಅವರಿಂದ ಪ್ರಜೆಗಳನ್ನು ಭಯಪಡುವಂತೆ ಮಾಡಿ ನಿನ್ನ ಅಧಿಪತ್ಯವಿರುವಂತೆ, ನಿನಗೆ ಪ್ರತ್ಯರ್ಥಿಗಳು ಇಲ್ಲದಂತೆ ಮಾಡಿದ್ದೀಯಾ. ಸರ್ಕಾರದ ಧನವನ್ನು ಸ್ವಲ್ಪ ಪ್ರಜೆಗಳಿಗೆ ವಿನಿಯೋಗಿಸಿ ಒಳ್ಳೆಯದು ಮಾಡಿದಂತೆ ಕಾಣಿಸುತ್ತಲೇ, ಪ್ರಜೆಗಳಿಗೆ ತಿಳಿಯದಂತೆ ಎಷ್ಟೋ ಧನವನ್ನು ಕೂಡಿಟ್ಟು ಕೊಂಡಿದ್ದೀಯಾ. ರಾಜಕೀಯದೊಳಗೆ ಬರುವುದಕ್ಕಿಂತ ಮೊದಲಿರುವ ಆಸ್ತಿಗಿಂತ ಹತ್ತುಪಟ್ಟು ಹೆಚ್ಚು ಆಸ್ತಿಯನ್ನು ಸಂಪಾದಿಸಿಕೊಂಡಿದ್ದೀಯಾ. ಆದರೆ ಇದೆಲ್ಲಾ ನಿನಗೆ ಕಾಣಿಸುವುದು. ಕಾಣಿಸದಿರುವುದು ಮತ್ತೊಂದು ಆಸ್ತಿ ನಿನಗೆ ತಿಳಿಯದಂತೆ

ನಿನ್ನ ಹತ್ತಿರ ಇದೆ. ಅದೇ ನೀನು ಸಂಪಾದಿಸಿಕೊಂಡ ಕರ್ಮ. ಮನುಷ್ಯನಿಗೆ ಎರಡು ಸಂಪಾದನೆಗಳು ಇರುತ್ತವೆಂದು ತಿಳಿಯದ ನೀನು, ಮೊದಲು ಇರುವ ಆಸ್ತಿಗಿಂತ ಹತ್ತುಪಟ್ಟು ಹೆಚ್ಚು ಸಂಪಾದಿಸಿಕೊಂಡಂತೆ, ಪಾಪವನ್ನು ಸಹ ಹಾಗೆ ಸಂಪಾದಿಸಿಕೊಂಡಿದ್ದೀಯಾ. ಈಗ ಹೇಳಿರುವುದೆಲ್ಲಾ ಪ್ರಪಂಚ ಪಾಪವೇ.

ಪ್ರಪಂಚ ಪಾಪವನ್ನು ಎಷ್ಟು ಸಂಪಾದಿಸಿಕೊಂಡಿದ್ದರೆ ಅಷ್ಟೇ ಅನುಭವಿಸಬೇಕಾಗಿರುತ್ತದೆ. ಇದು ದೈವಿಕವಾದ ಪಾಪವಂತಹದ್ದು ಅಲ್ಲ. ದೈವಿಕ ಪಾಪ ನಿತ್ಯಪಾಪ ಅದು ಒಂದುಸಲ ಅನುಭವಿಸಿದರೆ ಮುಗಿಯುವುದಿಲ್ಲ. ಪ್ರಪಂಚ ಪಾಪ ಹಾಗೆ ಅಲ್ಲ. ಪ್ರತಿ ಪಾಪಕ್ಕು ಒಂದು ಅನುಭವ ಮಾತ್ರವೆ ಇರುತ್ತದೆ. ತಪ್ಪಿಗೆ ತಕ್ಕಾದ ಶಿಕ್ಷೆ ಜಾರಿಯಾಗುತ್ತದೆ. ಪ್ರಪಂಚ ಪಾಪ ಅನುಭವಿಸಿದರೆ ಮುಗಿದುಹೋಗುತ್ತಿರುತ್ತದೆ. ಪ್ರಪಂಚ ಪಾಪವಾದರೂ ನಿತ್ಯ ಸಂಪಾದಿಸುವು ದರಿಂದ, ಚಿಕ್ಕ ತಪ್ಪುಗಳೆ ಅಲ್ಲದೆ ದೊಡ್ಡ ತಪ್ಪುಗಳು ಮಾಡಿರುವುದರಿಂದ, ಒಂದು ಗಂಟೆಯಲ್ಲಿ ಮಾಡಿದ ಪಾಪ ಒಂದು ದಿನದಿಂದ ಒಂದು ತಿಂಗಳವರೆಗು ಸರಿಹೋಗುವುದಾಗಿ ಇರುತ್ತದೆ. ಅದರಿಂದ ಸಂಪಾದಿಸಿದ ಕಾಲ ಕಡಿಮೆ. ಅನುಭವಿಸುವ ಕಾಲ ಹೆಚ್ಚು ಆಗುತ್ತಿದೆ. ಒಂದು ಕಳ್ಳತನ ಮಾಡಿದರೆ ಅದು ಚಿಕ್ಕ ಕಳ್ಳತನಕ್ಕೆ ಚಿಕ್ಕ ಪಾಪ, ದೊಡ್ಡ ಕಳ್ಳತನಕ್ಕೆ ದೊಡ್ಡ ಪಾಪ ಬರುತ್ತದೆ. ನೀನು ಮಾಡಿದ ಕೆಲಸದಿಂದ ಇತರರು ಅನುಭವಿಸಿದ ಕ್ಷೋಭೆಯನ್ನನುಸರಿಸಿ ದೊಡ್ಡ ಚಿಕ್ಕ ಪಾಪವಿರುತ್ತದೆ. ನೀನು ರಾಜಕೀಯದಲ್ಲಿ ಇತರರನ್ನು ಬಾಧಿಸಿದ ಬಾಧೆಗಳಿಗೆ ಅವರು ಕೆಲವು ವರ್ಷಗಳು ಬಾಧೆಪಟ್ಟು ಅನುಭವಿಸಿದ್ದಾರೆ. ನೀನು ಅನ್ಯಾಯವಾಗಿ ನಿನ್ನ ಅಧಿಕಾರದಿಂದ ಅಮಾಯಕನನ್ನು ಪೊಲೀಸ್ ಕೇಸಿನಲ್ಲಿ ಇರುಕಿಸಿರುವುದಕ್ಕೆ ನಿನಗೆ ಒಂದು ಗಂಟೆಕಾಲ ಹಿಡಿಸಿರುತ್ತದೆ. ಅನ್ಯಾಯವಾಗಿ ಇರುಕಿಸಿದ ಕೇಸಿನಿಂದ ಹೊರಬೀಳುವುದಕ್ಕೆ ಅವನಿಗೆ ಒಂದು ವರ್ಷಕಾಲ ಹಿಡಿಸಿದೆ. ಇದರಿಂದ ನೀನು ಒಂದು ಗಂಟೆ ಮಾಡಿದ ಕೆಲಸಕ್ಕೆ ಇತರರು ಒಂದು ವರ್ಷದ ಕಾಲ ಬಾಧೆ ಅನುಭವಿಸಿದ್ದಾರೆ, ಆದ್ದರಿಂದ ನಿನಗೆ ಬಂದಿರುವ ಒಂದು ಗಂಟೆ ಪಾಪ ವರ್ಷದ ದಿನಗಳು ಅನುಭವಿಸಬೇಕಾಗಿದೆ. ಹೀಗೆ ಒಂದು ಜನ್ಮದಲ್ಲಿ ಮಾಡಿಕೊಂಡ ಪ್ರಪಂಚ ಕರ್ಮ ನಾಲ್ಕು, ಐದು ಜನ್ಮಗಳಿಗೆ ಸರಿಹೋಗುವುದಾಗಿ ಇರುತ್ತದೆ. ಅದನ್ನು ಅಷ್ಟುಕಾಲ ಅನುಭವಿಸಬೇಕಾಗಿದೆ!

ಆದರೆ ಪ್ರಪಂಚ ವಿಷಯಗಳಲ್ಲಿ ಅಂದರೆ ಪ್ರಪಂಚ ಕರ್ಮಗಳಲ್ಲಿ ಮನುಷ್ಯರಿಗೆ ದೇವರು ಒಂದು ರಿಯಾಯಿತಿ ಪ್ರಕಟಿಸಿದ್ದಾನೆ. ಯಾರು ಎಷ್ಟು ಪ್ರಪಂಚ ಪಾಪವನ್ನು ಮಾಡಿದ್ದರೂ ಆತನು **"ದೇವರ ಜ್ಞಾನವನ್ನು ಅನುಸರಿಸಿ, ಆಚರಿಸುವುದರಿಂದ ಅವನಕರ್ಮವೆಲ್ಲವೂ ಹೊಡೆದುಹಾಕಲ್ಪಡುತ್ತದೆ ಅಥವಾ ಕ್ಷಮಿಸಲ್ಪಡುತ್ತದೆ"** ಎಂದು ಹೇಳಿದ್ದಾನೆ. ಈ ವಿಷಯುವನ್ನು ಪ್ರಥಮ ದೈವಗ್ರಂಥವಾದ ಭಗವದ್ಗೀತೆಯಲ್ಲಿ ಜ್ಞಾನಯೋಗವೆಂಬ ಅಧ್ಯಾಯದಲ್ಲಿ 36, 37 ಶ್ಲೋಕಗಳಲ್ಲಿ ಹೀಗೆ ಹೇಳಿದ್ದಾರೆ ನೋಡಿರಿ...

**36ನೇಶ್ಲೋ॥ ಅಪಿ ಚೇದಸಿ ಪಾಪೇಭ್ಯಸ್ಸರ್ವೇಭ್ಯಃ ಪಾಪಕೃತ್ತಮಃ**
**ಸರ್ವಂ ಜ್ಞಾನಪ್ಲವೇನೈವ ವೃಜಿನಂ ಸಂತರಿಷ್ಯಸಿ ॥**

**ಭಾವಾರ್ಥ:- "ಅಖಿಲ ಪಾಪಾತ್ಮರಲ್ಲಿ ನೀನು ಎಷ್ಟು ದೊಡ್ಡ ಪಾಪ ಮಾಡಿದವನಾದರು, ಕೊಳಚೆ ಸಮುದ್ರವನ್ನು ಜ್ಞಾನವೆಂಬ ದೋಣಿಯಿಂದ ದಾಟಬಲ್ಲೆವು."**

**37ನೇ ಶ್ಲೋ॥ ಯಥೈಧಾಂಸಿ ಸಮಿದ್ಧೋಗ್ನಿ ರ್ಭಸ್ಮಸಾತ್ಕುರು ತೇರ್ಜುನ ।**
**ಜ್ಞಾನಾಗ್ನಿ ಸ್ಸರ್ವಕರ್ಮಾಣಿ ಭಸ್ಮಸಾತ್ಕುರುತೇ ತಥಾ ॥**

**ಭಾವಾರ್ಥ:- "ಅಗ್ನಿಯಲ್ಲಿ ಎಷ್ಟು ಕಟ್ಟಿಗೆಗಳಾದರೂ ಸುಟ್ಟು ಬೂದಿಯಾದಂತೆ. ಜ್ಞಾನವೆಂಬ ಅಗ್ನಿಯಲ್ಲಿ ನೀನು ಮಾಡಿಕೊಂಡ ಸರ್ವಕರ್ಮಗಳು ಅನುಮಾನ ಇಲ್ಲದಂತೆ ಸುಟ್ಟುಹೋಗುತ್ತವೆ."**

ದೇವರು ತನ್ನ ಜ್ಞಾನದಲ್ಲಿ ಹೇಳಿದ ಪ್ರಕಾರ ಮನುಷ್ಯ ಸಂಪಾದಿಸಿಕೊಂಡ ಪ್ರಪಂಚ ಕರ್ಮವೆಲ್ಲವೂ, ಅನುಭವಿಸದಂತೆ ತಪ್ಪಿಸಿಕೊಳ್ಳುವ ಸುಲಭಮಾರ್ಗವಿದೆ. ಮನುಷ್ಯ ಮಾಡಿದ ಪ್ರತಿ ಪಾಪವನ್ನು ತಪ್ಪದೆ ಅನುಭವಿಸಬೇಕಾಗಿ ಇರುತ್ತದೆ. ಅದರೆ 'ದೈವಜ್ಞಾನವನ್ನು ತಿಳಿದು, ಅದನ್ನು ಆಚರಿಸುವುದರಿಂದ ಮನುಷ್ಯ ಮಾಡಿಕೊಂಡ ಪಾಪಗಳೆಲ್ಲ ಕ್ಷಮಿಸಲ್ಪಡುತ್ತವೆಂದು' ಮೂರು ದೈವಗ್ರಂಥಗಳಲ್ಲಿ ಹೇಳಿದ್ದಾನೆ. ಆದ್ದರಿಂದ ಯಾವ ಮತಸ್ಥನಿಗಾದರೂ ಈ ನಿಯಮ ಅನ್ವಯಿಸುತ್ತದೆ.

ಆದ್ದರಿಂದ ನೀನು ಮಾಡಿಕೊಂಡ ಪ್ರಪಂಚ ಸಂಬಂಧ ಪಾಪ ಎಷ್ಟು ದೊಡ್ಡದಾದರೂ, ಅದು ಎಷ್ಟು ಕೆಟ್ಟದಾದರೂ ಒಂದು ದೈವಜ್ಞಾನದಿಂದ ತಪ್ಪಿಸಿಕೊಳ್ಳುವ ಅವಕಾಶವನ್ನು ದೇವರು ಕಲ್ಪಿಸಿದ್ದಾನೆ. ಈಗಲಾದರೂ ನೀನು ಮಾಡಿಕೊಂಡ ಪಾಪಗಳನ್ನು ತಿಳಿದುಕೊಂಡು ದೈವಜ್ಞಾನದಿಂದ ಪ್ರಪಂಚ ಸಂಬಂಧ ಕರ್ಮಗಳನ್ನಾದರೂ ಇಲ್ಲದಂತೆ ಮಾಡಿಕೊಳ್ಳುವುದಕ್ಕೆ ಪ್ರಯತ್ನಿಸೆಂದು ಈ ಲೇಖದ ಮೂಲಕ ತಿಳಿಸುತ್ತಿದ್ದೇನೆ. ನಿಮ್ಮನ್ನು ಎಚ್ಚರಗೊಳಿಸಿ ಹೇಳುವುದು ನಮ್ಮ ಕರ್ತವ್ಯ. ನಂತರ ನೀನು ಪಾಪವನ್ನು ಇಲ್ಲದಂತೆ ಮಾಡಿಕೊಳ್ಳುವುದು ನಿನ್ನ ಕೆಲಸ. ಆದರೆ ನಾವು ನಿಮಗೆ ಇಲ್ಲಿಯವರೆಗು ಹೇಳಿರುವುದು ಹಿತೋಪದೇಶ, ಆದರೂ ನಿನ್ನ ಬುದ್ಧಿ ಗ್ರಹಿಸಿಕೊಳ್ಳುವುದನ್ನು ಅನುಸರಿಸಿ ನಾನು ಹೇಳಿರುವುದು ಒಳ್ಳೆಯದಾಗಿ ಆದರೂ ಕಾಣಿಸಬಹುದು ಅಥವಾ ಕೆಟ್ಟದಾಗಿ ಆದರೂ ಕಾಣಿಸಬಹುದು. ನಿನ್ನಲ್ಲಿ ಗುಣಗಳು ಕೆಲಸ ಮಾಡಿ ಗರ್ವದಿಂದ "ನಾನೇ ದೊಡ್ಡವನು ಯಾರೋ ಹೇಳಿದ ಮಾತುಗಳೇಕೆ ಕೇಳಬೇಕು?" ಎಂದು ತಿಳಿದುಕೊಂಡರೆ ನಾವು ಏನು ಮಾಡಲಾರೆವು. ನೀನು ಪಾಪವನ್ನು ಅನುಭವಿಸಿದರೂ, ಅನುಭವಿಸದಿದ್ದರೂ ನಮಗೆ ನಷ್ಟವಾಗಲಿ ಲಾಭವಾಗಲಿ ಇರುವುದಿಲ್ಲ. ಇಲ್ಲಿಯವರೆಗು ಹೇಳಿರುವುದು ನಿನ್ನೊಬ್ಬನಿಗೆ ಅಲ್ಲ, ಇದೆಲ್ಲವೂ ಲೋಕಹಿತಕ್ಕೋಸ್ಕರವೆಂದು ಹೇಳುತ್ತಿದ್ದೇವೆ. ನಿನ್ನ ಲೇಖನವನ್ನು ಓದಿದ ನೀನು ಒಳ್ಳೆಯವನಾಗದಿದ್ದರೂ, ಇದರಲ್ಲಿನ ಸಾರವನ್ನು ಗ್ರಹಿಸಿದ ಇತರರಾದರೂ ಪಾಪದ ಬಗ್ಗೆ ಜಾಗ್ರತೆಯಾಗಿ ಇರುತ್ತಾರೆ.

ಒಂದುವೇಳೆ ನೀನು ನನ್ನ ಮಾತುಗಳನ್ನು ಗ್ರಹಿಸಿಕೊಂಡು ಇನ್ನು ಮುಂದಾದರೂ ದೇವರ ಮಾರ್ಗದಲ್ಲಿ ಪ್ರಯಾಣಿಸಿದರೆ, ಈ ಜನ್ಮದಲ್ಲಿ ಮಾಡಿಕೊಂಡ ಪಾಪಗಳು ಮತ್ತು ಗತ ಜನ್ಮಗಳಲ್ಲಿ ಮಾಡಿಕೊಂಡ ಪಾಪಗಳು (ಕರ್ಮಗಳು) ಇಲ್ಲದಂತೆ ಹೋಗುತ್ತವೆ. ಆದರೆ ಒಂದು ವಿಷಯವನ್ನು ಚೆನ್ನಾಗಿ ಜ್ಞಾಪಕ ಇಟ್ಟುಕೊಳ್ಳಬೇಕು. ನೀನು ಎಷ್ಟೋ ಜ್ಞಾನಹೊಂದಿ ದೇವರ ಮಾರ್ಗದಲ್ಲಿ ಪ್ರಯಾಣಿಸುತ್ತಾ, ದೇವರಸೇವೆ ಮಾಡಲ್ಪಟ್ಟರೂ, ನೀನು ಸಂಪಾದಿಸಿಕೊಂಡ ಪ್ರಪಂಚ ಕರ್ಮಗಳು ಮಾತ್ರ ಜ್ಞಾನಾಗ್ನಿಯಲ್ಲಿ ದಹಿಸಲ್ಪಟ್ಟು ಇಲ್ಲದಂತೆ

ಹೋಗುತ್ತವೆ. ಅಷ್ಟೇಹೊರತು ನೀನು ಮಾಡಿಕೊಂಡ ಜ್ಞಾನಸಂಬಂಧ, ದೈವ ಸಂಬಂಧ ಪಾಪಗಳು ಮಾತ್ರ ಹಾಗೆ ಉಳಿದಿರುತ್ತವೆ. ಜ್ಞಾನಕ್ಕೆ ವಿರೋಧವಾಗಿ ಬಂದಿರುವ ಕರ್ಮಗಳನ್ನು ಜ್ಞಾನದಿಂದ ಪರಿಷ್ಕಾರ ಆಗುವುದಿಲ್ಲ. ಜ್ಞಾನಾಗ್ನಿ ಅವುಗಳನ್ನು ಸುಡುವುದಿಲ್ಲ. ಪ್ರಪಂಚದಲ್ಲಿನ ಎಲ್ಲವನ್ನು ಸುಡುವ ಅಗ್ನಿ ತನ್ನನ್ನು ತಾನು ಸುಟ್ಟುಕೊಳ್ಳಲಾರದು. ಅಗ್ನಿಯಲ್ಲಿ ಯಾವ ವಸ್ತುವಾದರೂ ಸುಡಲ್ಪಟ್ಟು ಇಲ್ಲದಂತಾಗುತ್ತದೆ. ಆದರೆ ಅಗ್ನಿ ಅಗ್ನಿಯನ್ನು ಸುಡಲಾರದು. ಇತರರನ್ನು ದಹಿಸಿ ಪ್ರಕಾಶಿಸುವ ಅಗ್ನಿ ತನ್ನನ್ನು ತಾನು ಹೇಗೆ ಸುಟ್ಟುಕೊಳ್ಳಲಾರದೊ, ಹಾಗೆ ಜ್ಞಾನ ಸಂಬಂಧವಾದ ಪಾಪಗಳನ್ನು ಜ್ಞಾನ ಇಲ್ಲದಂತೆ ಮಾಡಲಾರದು. **"ಜ್ಞಾನಕ್ಕೆ ವಿರೋಧವಾದ ಕರ್ಮ ಯಾವುದಾದರೂ ಜ್ಞಾನದಿಂದ ತೆಗೆದುಹಾಕಲ್ಪಡುವುದಿಲ್ಲ ಅಥವಾ ಸುಡಲ್ಪಡುವುದಿಲ್ಲ"** ಎಂದು ಹೇಳಬಹುದು. ಆದ್ದರಿಂದ ಗತದಲ್ಲಿ ತುಚ್ಛ ರಾಜಕೀಯಗಳಿಗೋಸ್ಕರ ಮಾಡಿಕೊಂಡ ಜ್ಞಾನ ವಿರೋಧದ ಪಾಪಗಳು ನೀನು ಜ್ಞಾನಿಯಾದರೂ ಇಲ್ಲದಂತೆ ಹೋಗಲಾರವು. ಎರಡು ಮತ್ತು ಎರಡು ಒಟ್ಟು ನಾಲ್ಕು ಯುಗಗಳ ಪರ್ಯಂತವು ನಿತ್ಯ ಪಾಪವನ್ನು ಅನುಭವಿಸಬೇಕಾಗಿರುತ್ತದೆ. ಜ್ಞಾನವಿರೋಧ ಪಾಪಗಳಿಂದ ನೀನು ಹೇಗೊ ಹೊರಬೀಳಲಾರೆ, ಪ್ರಪಂಚ ಸಂಬಂಧ ಕರ್ಮಗಳಿಂದಾದರೂ ಹೊರಬೀಳೆಂದು ಈ ಉತ್ತರದ ಮೂಲಕ ತಿಳಿಸುತ್ತಿದ್ದೇವೆ.

ಇಂತಿ

***ಆಚಾರ್ಯ ಪ್ರಬೋಧಾನಂದ ಯೋಗೀಶ್ವರರು***

## ಮೂರನೇ ಲೇಖ

***ಸಂಸಾರಿಯಂತಿರುವ ವ್ಯಭಿಚಾರಿಗೆ...***

ಜೀವಾತ್ಮ ಸ್ವರೂಪಗಳಾದ ರೇಕುಲ ಅಂಕಾಲಮ್ಮ ವೆಂಕಮ್ಮ ನವರಿಗೆ ಬರೆಯುವ ಉತ್ತರ ಏನೆಂದರೆ!

ನೀವು ಒಂದುಸಲ ನನ್ನೊಂದಿಗೆ ಬೇಟಿಯಾಗಿ ಮಾತನಾಡಿರುವುದು

ನಡೆದಿದೆ. ನೀವು ಹೇಳಿರುವುದೆಲ್ಲಾ ಕೇಳಿದ್ದೇನೆ. ನಮ್ಮಿಂದ ನಿಮಗೆ ಏನಾದರೂ ಒಳ್ಳೆಯದು ನಡೆಯುತ್ತದೇನೋ ಎಂದು ಆಸೆಯಿಂದ ನೀವು ನಿಮ್ಮ ಕುಟುಂಬ ವಿಷಯಗಳನ್ನು, ನಿಮ್ಮ ಸ್ವಂತ ವಿಷಯಗಳನ್ನು ನಮಗೆ ಹೇಳುವುದು ನಡೆದಿದೆ. ನೀವು ಹೇಳಿರುವವೆಲ್ಲ ನಿಜವೇಯೆಂದು ನಾನು ಆಗ ಅಂದುಕೊಳ್ಳುವುದಾಗಿದೆ. ಆದರೆ ಸ್ವಲ್ಪ ಕಾಲ ಕಳೆದ ನಂತರ ಹೇಳಿದ ಮಾತುಗಳೆಲ್ಲ ನಿಜ ಅಲ್ಲವೆಂದು ನನಗೆ ಸ್ವಲ್ಪ ಅರ್ಥವಾಗಿದೆ. ನಿಮ್ಮ ತಂದೆಯವರು ಉದ್ಯೋಗ ಮಾಡುತ್ತಾ ಲಂಚಗಳು ತೆಗೆದುಕೊಳ್ಳದಂತೆ ಬದುಕುವವನೆಂದು ಹೇಳಿದ್ದಾರೆ. ಆದರೆ ನಂತರ ನನಗೆ ತಿಳಿದ ಸತ್ಯದ ಪ್ರಕಾರ ನಿಮ್ಮ ತಂದೆಯವರು ಒಳ್ಳೆಯವರೇ ಆದರೆ ನೀವು ಅಂದರೆ ನಿಮ್ಮ ಅಮ್ಮ, ನೀವು ಇಬ್ಬರೂ ಸೇರಿ ಲಂಚಗಳು ತೆಗೆದುಕೊಳ್ಳಲು ಹೇಳುತ್ತಿದ್ದರು. ಆತನು ಮಾಡುವ ಉದ್ಯೋಗದಲ್ಲಿ ಪ್ರತಿ ದಿನ ಲಂಚದಿಂದ ಬಂದಿರುವ ಸ್ವಲ್ಪ ಹಣವಾದರೂ ಮನೆಯಲ್ಲಿ ಕೊಡಬೇಕೆಂದು ಒತ್ತಡ ತರುತ್ತಿದ್ದರು. ನಿಮ್ಮ ತಂದೆಯವರು ಒಬ್ಬ ಪೊಲೀಸ್ ಸ್ಟೇಷನಲ್ಲಿ ಸಬ್ ಇನ್‌ಸ್ಪೆಕ್ಟರಾಗಿ ಕೆಲಸ ಮಾಡುತ್ತಾ ಮನೆಯಲ್ಲಿ ನಿಮ್ಮ ಗಲಾಟೆ ತಡೆಯಲಾರದೆ, ಲಂಚಗಳನ್ನು ತೆಗೆದುಕೊಳ್ಳದೆ ದುಃಖ ಪಡುತ್ತಿದ್ದನು. ಒಂದು ದಿನ ಒಂದು ಕೇಸಿಗೆ ಸಂಬಂಧಿಸಿ ಹತ್ತುಸಾವಿರ ಲಂಚ ತೆಗೆದುಕೊಂಡು A.C.B ಅಧಿಕಾರಿಗಳಿಗೆ ದೊರೆತು ಅವಮಾನದ ಪಾಲಾಗಿದ್ದಾನೆ. ಉದ್ಯೋಗದಿಂದ ಸಸ್ಪೆಂಡ್ ಆಗಿದ್ದಾನೆ. ಆತನು ನಿಮ್ಮ ಪ್ರವರ್ತನೆಯುನ್ನು ಭರಿಸಲಾರದೆ ಆತ್ಮಹತ್ಯೆ ಮಾಡಿಕೊಂಡು ಮರಣಿಸುವುದಾಗಿದೆ. ಆತನು ಮರಣಿಸಿದ ನಂತರ ಉದ್ಯೋಗದಿಂದ ಬರುವ ಹಣವೆಲ್ಲ ನಿಮಗೆ ಬಂದಿವೆ. ನಿಮ್ಮ ಮನೆಯಲ್ಲಿ ಮಗನಿಗೆ ಉದ್ಯೋಗ ಸಹ ಬಂದಿದೆ. ಆತನ ಸಂಬಳದಿಂದ ಕಾಲ ಕಳೆಯುತ್ತಿರುವ ನೀವು ಇಲ್ಲಿಯವರೆಗು ನಾವು ಮಾಡಿದ ಕೆಲಸಕ್ಕೆ ನಮ್ಮ ತಂದೆಯವರು ಮರಣಿಸಿದ್ದಾನೆಂದು ನೀನು ತಿಳಿದುಕೊಳ್ಳಲಿಲ್ಲ, ನನ್ನ ಗಂಡ ಮರಣಿಸಿದ್ದಾನೆಂದು ನಿಮ್ಮ ಅಮ್ಮ ತಿಳಿದುಕೊಳ್ಳಲಿಲ್ಲ. ಅಷ್ಟು ನಡೆದರೂ ನಿಮ್ಮಲ್ಲಿ ಬದಲಾವಣೆಯು ಏನು ಬರಲಿಲ್ಲ.

ನಿನ್ನ ತಮ್ಮನು ಉದ್ಯೋಗ ಮಾಡುತ್ತಿದ್ದರೆ ಆತನ ಸಂಬಳದಿಂದ ಕಾಲ ಕಳೆಯುತ್ತಾ ಆತನಿಗೆ ಮದುವೆ ವಯಸ್ಸು ಬಂದರೂ ಇಲ್ಲಿಯವರೆಗು

ಮದುವೆ ಮಾಡಲಿಲ್ಲ. ವಯಸ್ಸಿನಲ್ಲಿರುವ ನೀನು ತಪ್ಪುದಾರಿ ಹಿಡಿದು ಪರ ಪುರುಷರೊಂದಿಗೆ ಅಕ್ರಮ ಸಂಬಂಧ ಇಟ್ಟುಕೊಳ್ಳುವುದು, ಅವರಿಂದ ಹಣವನ್ನು ಕೀಳುವುದು ಮಾಡಲು ಮೊದಲುಮಾಡಿದ್ದೀಯಾ. ನಿಮ್ಮ ಅಮ್ಮ ಸಹ ಅದೇ ಒಳ್ಳೆಯದೆನ್ನುವಂತೆ ನಿನ್ನನ್ನು ಪ್ರೋತ್ಸಾಹಿಸಿದ್ದಾಳೆ. ಹೀಗೆ ರಹಸ್ಯ ಅವ್ಯವಹಾರಗ ಳನ್ನು ಮಾಡುತ್ತಾ ಸ್ವಲ್ಪ ಹಣ ಸಂಪಾದಿಸಿಕೊಳ್ಳುವುದು ನಡೆದಿದೆ. ನಾವು ಯಾರಿಗೂ ತಿಳಿಯದಂತೆ ಮಾಡಿರುವುದು ನಿಮಗೆ ಹೇಗೆ ತಿಳಿದಿದೆಯೆಂದು ಆಶ್ಚರ್ಯಹೋಗಬೇಡಿ. ನನಗೆ ಹೇಗೆ ತಿಳಿದರೂ ನಾನು ಹೇಳುವುದು ನಿಮ್ಮ ಶ್ರೇಯಸ್ಸಿಗಾಗಿ ಎನ್ನುವ ವಿಷಯವನ್ನು ಮರೆತುಹೋಗಬೇಡಿ. ನೀವು ನನ್ನನ್ನು ಬೇಟಿಯಾದಾಗ, ನನ್ನ ಹತ್ತಿರ ಮಾತನಾಡುವ ಅವಕಾಶಕೊಟ್ಟಾಗ, ನೀವು ನನ್ನೊಂದಿಗೆ ಹೇಳಿದ ಎಲ್ಲಾ ಮಾತುಗಳು ಪೂರ್ತಿ ಅಸತ್ಯವೆಂದು ಈ ಮಧ್ಯ ಕಾಲದಲ್ಲಿ ತಿಳಿದಿದೆ. ಭೂಮಿಮೇಲೆ ಎಲ್ಲಾ ವಿಧಗಳ ಮನುಷ್ಯರಿದ್ದಾರೆನ್ನುವ ಅನುಭವ ಸಹ ನಮಗೆ ಬಂದಿದೆ. ನಿಮ್ಮ ಮಾತುಗಳನ್ನು ಕೇಳಿದ ನಂತರ ನಿಮಗೆ ಒಳ್ಳೆಯದು ಮಾಡಬೇಕೆಂದು ಕೊಂಡಿದ್ದೇನೆ. ಹಾಗೆ ಒಳ್ಳೆಯದು ಕೂಡಾ ಮಾಡುವುದಾಗಿದೆ. ಆದರೆ ಒಳ್ಳೆಯತನವೆಲ್ಲಾ ಬೂದಿಯಲ್ಲಿ ಸುರಿದ ಪನ್ನೀರಿನಂತೆ ವ್ಯರ್ಥವಾಗಿಹೋಗಿದೆ.

ನಮ್ಮ ಹತ್ತಿರಕ್ಕೆ ಬರುವವರೆಲ್ಲರೂ ಭಯಭಕ್ತಿಗಳಿಂದ ಇರುತ್ತಾರೆ. ದುರಭ್ಯಾಸಗಳು ಇಲ್ಲದವರೆ ನಮ್ಮ ಹತ್ತಿರಕ್ಕೆ ಬರುತ್ತಿರುತ್ತಾರೆ. ಬೀಡಿ, ಸಿಗರೇಟ್ ಕುಡಿಯುವವರೂ ಸಹ ನಮ್ಮ ಮುಂದಕ್ಕೆ ಬರಬೇಕೆಂದರೆ ಭಯಪಟ್ಟು ದೂರವಾಗಿರುತ್ತಾರೆ. ಮತ್ತು ಪಾನೀಯಗಳು ಕುಡಿಯುವವರು ಯಾರೂ ಇಲ್ಲಿಗೆ ಬರುವುದಿಲ್ಲ. ಒಂದುವೇಳೆ ಮೊದಲು ಮತ್ತು ಪಾನೀಯಗಳ ಅಭ್ಯಾಸ ಇರುವವರು ಅವುಗಳೆಲ್ಲವನ್ನು ಬಿಟ್ಟು, ಹಳೆ ಅಭ್ಯಾಸಗಳೆಲ್ಲವನ್ನು ಬಿಟ್ಟ ನಂತರವೆ ನಮ್ಮ ಹತ್ತಿರಕ್ಕೆ ಬರುತ್ತಿರುತ್ತಾರೆ. ಅಂತಹ ಪದ್ಧತಿ ಇರುವ ನೀವು ಇಲ್ಲಿಗೆ ಎರಡು ಮೂರು ಸಲ ಬಂದಿದ್ದೀರಾ. ಬಂದವರು ಇಲ್ಲಿನ ಪದ್ಧತಿಗಳೆಲ್ಲ ನೋಡಿಯೂ ಸಹ ನಮಗೆ ತಿಳಿಯದಂತೆ ನಿಮಗೆ ಕೊಟ್ಟಿರುವ ರೂಮಿನಲ್ಲಿ ಮತ್ತು ಪಾನೀಯಗಳು ಕುಡಿಯುವುದು ನಡೆದಿದೆ. ನಮಗೆ ತಿಳಿಯದೆಂದುಕೊಂಡ

ವಿಷಯ ತಿಳಿದು ನಾವು ಹೇಳಿದಾಗ, ನಮ್ಮ ಮನುಷ್ಯರು ಬಂದು ನಿಮ್ಮನ್ನು ದಂಡಿಸುವುದು ಸಹ ನಡೆದಿದೆ. ರೂಮಿನಲ್ಲಿ ಸಾರಾಯಿ ವಾಸನೆ ಬರುತ್ತದೆಂದು ನಮ್ಮ ಮನುಷ್ಯ ಕೇಳಿದರೆ ನೀವು ಕುಡಿಯುವುದಿಲ್ಲ ಎಂದು ಸುಳ್ಳನ್ನು ಹೇಳಿದ್ದೀರ.

ಇದಕ್ಕು ಮೊದಲು ಅಂದರೆ ನೀವು ಇಲ್ಲಿಗೆ ಬರುವುದಕ್ಕಿಂತ ಮೊದಲು ಎಲ್ಲಾ ಅಭ್ಯಾಸಗಳು ಇರುವುದರಿಂದ, ಒಂದುದಿನವೂ ಸಹ ಕುಡಿಯುವುದು ಬಿಡಲಾರದೆ ಕುಡಿಯುತ್ತಿದ್ದಿರೆಂದು ನನಗೆ ಅರ್ಥವಾಗಿ ನಾನು ಸ್ವತಃ ದಂಡಿಸುವುದು ನಡೆದಿದೆ. ಆಗಲೂ ಸಹ ನಿಜವನ್ನು ಒಪ್ಪಿಕೊಳ್ಳದೆ ನಿಮ್ಮ ಹಿಂದೆಬಂದಿರುವ ಮುದುಕನೊಬ್ಬ ಕುಡಿಯುವುದರಿಂದ ವಾಸನೆ ಬಂದಿದೆಯೆಂದು ಸುಳ್ಳನ್ನು ಹೇಳಿ ಸರಿಮಾಡಿದ್ದೀರಾ. ನೀನು ಕೆಟ್ಟ ವೃತ್ತಿ ಯಾರಿಗೂ ತಿಳಿಯದಂತೆ ಮಾಡುತ್ತಾ, ನಿನ್ನ ತಂಗಿಗು ಕೂಡಾ ಅದೇ ಕೆಲಸವನ್ನು ಕಲಿಸಿದ್ದೀಯಾ. ಮೇಲಾಗಿ ನಿನಗೆ ಮದುವೆಯಾಗಿದೆಯೆಂದು, ಗಂಡ ಬಿಟ್ಟಿದ್ದಾನೆಂದು, ನಮಗೆ ಹೇಳಿದ್ದೀಯಾ. ನಂತರ ನಿನ್ನ ತಂಗಿಯ ಮದುವೆಗೋಸ್ಕರ ಇಲ್ಲಿಗೆ ಬಂದಿದ್ದೇನೆಂದು, ಒಳ್ಳೆಯ ಹುಡುಗನನ್ನು ನೋಡಿ ನೀವೇ ಮದುವೆ ಮಾಡಿರೆಂದು ಕೇಳಿದ್ದೀಯಾ. ನಿಮ್ಮ ಅಮ್ಮ, ನಿನ್ನ ತಂಗಿ ಬಂದು ಎಷ್ಟೋ ಭಕ್ತಿಯಿಂದ ನಟಿಸುತ್ತಾ ಕೇಳಿದ್ದೀರಾ. ನೀವು ಯಾವ ದಿಕ್ಕು ಇಲ್ಲವೆಂದು ಹೇಳಿ ಪ್ರಾಧೇಯಬಿದ್ದು ಕೇಳಿದ್ದೀರಾ. ಅದಕ್ಕೆ ಕೃಪೆತೋರಿ ನಾವು ನಿನ್ನ ತಂಗಿಗೆ ಒಬ್ಬ ಒಳ್ಳೆಯ ಹುಡುಗನನ್ನು ತೋರಿಸಿದ್ದೇವೆ. ಪೈಸಾ ಖರ್ಚು ಇಲ್ಲದೆ ಮದುವೆ ಮಾಡಿಕೊಳ್ಳುವಂತೆ ಏರ್ಪಾಡು ಮಾಡಿದ್ದೇವೆ. ನಾವು ಎಷ್ಟೋ ಶ್ರಮಿಸಿ ಒಬ್ಬ ಹುಡುಗನನ್ನು ತೋರಿಸಿ ಮದುವೆ ಮಾಡಿದರೆ, ವಾರಕ್ಕೆ ಹುಡುಗನ ಮೇಲೆ ತಪ್ಪು ಆರೋಪಣೆಗಳು ಮಾಡಿ, ಆತನು ನಮಗೆ ಇಷ್ಟವಿಲ್ಲವೆಂದು ಹೇಳಿ ಬಿಟ್ಟುಹೋಗಿದ್ದೀರ. ನಿಮ್ಮಿಬ್ಬರ ಅಕ್ಕ ತಂಗಿಯರಿಗೆ ಕುಡಿಯುವ ಅಭ್ಯಾಸ ಇರುವಂತೆ ನಮಗೆ ತಿಳಿದಿದೆ. ಅಂದಿನಿಂದ ನಿಮ್ಮನ್ನು ಇಲ್ಲಿಗೆ ಬರಲು ಅವಕಾಶಕೊಡಲಿಲ್ಲ.

ಇಲ್ಲಿಯವರೆಗು ನೀವು ಮಾಡಿದ ತಪ್ಪುಗಳನ್ನು ಹೇಳಿದ್ದೇವೆ. ನಿಮಗೆ ಜ್ಞಾನದ ಮೇಲೆ ಆಸಕ್ತಿ ಇಲ್ಲದಿದ್ದರೂ ಭಕ್ತಿ ಶ್ರದ್ಧೆಗಳಿರುವಂತೆ ನಟಿಸುತ್ತಾ ಇಲ್ಲಿಗೆ

ಬಂದಿದ್ದೀರಾ. ನಿಮ್ಮ ನಟನೆಗೆ ನಾವು ಮೋಸಹೋಗಿ ಜ್ಞಾನದ ಮೇಲೆ ಶ್ರದ್ಧೆ ಇದೆಯೇನೊ ಎಂದು ತಿಳಿದುಕೊಂಡಿದ್ದೇವೆ. ನೀವು ನಮ್ಮ ಹತ್ತಿರಕ್ಕೆ ಬಂದಿರುವುದು ಪ್ರಪಂಚ ಸಂಬಂಧವಾದ ವಿಷಯಕ್ಕಾಗಿ, ನಿನ್ನ ತಂಗಿಗೆ ಅಲ್ಲಿ ನಿಮ್ಮ ಊರಿನಲ್ಲಿ ಮದುವೆ ಆಗುವುದಿಲ್ಲವೆಂದು ತಿಳಿದು ಇಲ್ಲಿಯಾದರೆ ಸರಿಹೋಗುತ್ತದೆಂದು ಬಂದಿದ್ದೀರ. ನನ್ನನ್ನು ಜ್ಞಾನದಲ್ಲಿ ತೊಂದರೆ ಇಡಲಿಲ್ಲ. ನಿಮ್ಮ ದೃಷ್ಠಿ ಎಲ್ಲವೂ ಪ್ರಪಂಚ ಒಳ್ಳೆಯದಕ್ಕೋಸ್ಕರ ಇರುವುದರಿಂದ, ಇದು ಜ್ಞಾನ ಸಂಬಂಧವಾದ ವಿಷಯವೇ ಅಲ್ಲ. ಜ್ಞಾನವೊಂದರ ಬೆಲೆ ತಿಳಿದಿಲ್ಲವಾದ್ದರಿಂದ, ಎಲ್ಲಿ ಹೇಗೆ ನಡೆದುಕೊಳ್ಳಬೇಕೆಂದು ತಿಳಿಯದೆ ನಿಮ್ಮ ದುರಭ್ಯಾಸಗಳನ್ನು ನೀವು ಇಲ್ಲಿಯೂ ಸಹ ಬಿಡಲಿಲ್ಲ. ಹಾಗೆ ಇಲ್ಲಿಗೆ ಬಂದು ನಮಗೆ ತಿಳಿಯದಂತೆ ಮತ್ತು ಪಾನೀಯಗಳು ಕುಡಿದಿರುವುದು, ಮದುವೆ ಮಾಡಿದರೆ ಏಳು ದಿನಗಳಿಗೆ ಗಂಡನನ್ನು ಬಿಟ್ಟುಬಿಡುವುದು, ನಮ್ಮೊಂದಿಗೆ ಅಸತ್ಯಗಳು ಹೇಳುವುದು, ನಿಮ್ಮ ಅಮ್ಮ ನೀವು ಸೇರಿ ನಿಮ್ಮ ತಂದೆಯನ್ನು ಲಂಚಗಳು ತೆಗೆದುಕೊ ಎಂದು ಬಾಧಿಸುವುದು, ಮೊದಲಾದ ಕಾರ್ಯಗಳೆಲ್ಲವೂ ಪ್ರಪಂಚ ಸಂಬಂಧವಾದವೇ ಆಗಿರುವುದರಿಂದ, ನಿನಗೆ ಪ್ರಪಂಚ ಸಂಬಂಧವಾದ ಪಾಪವೇ ಬಂದಿದೆ. ನೀವು ಮಾಡಿರುವುದು ಎಲ್ಲಾ ತಪ್ಪುಕೆಲಸಗಳೇ ಆಗಿರುವುದರಿಂದ ಪಾಪವೇ ಬಂದಿದೆಯೆಂದು ಹೇಳಬಹುದು. ನಮ್ಮ ಹತ್ತಿರಕ್ಕೆ ಬಂದು ದಯೆ ಉಂಟಾಗುವಂತೆ ಹೇಳಿ ನಮ್ಮಿಂದಲೇ ಮದುವೆ ವರನನ್ನು ನೋಡಿಕೊಂಡಿದ್ದೀರಾ. ನಾವು ನಿಮಗೆ ಮಾಡಿರುವುದು ಸಹ ಎಲ್ಲವೂ ಪ್ರಪಂಚ ಸಂಬಂಧವಾದ ಸಹಾಯವೇ ಆಗಿರುವುದರಿಂದ ನಿಮ್ಮೂವರಿಗು ಪಾಪವೇ ಬಂದಿದೆ. ನಿಮ್ಮ ಮೂವರಲ್ಲಿ ನಿನ್ನೊಬ್ಬಳದೆ ಹೆಚ್ಚಿನ ಪಾತ್ರ ಇರುವುದರಿಂದ ನಿಮ್ಮ ಅಮ್ಮನಿಗಿಂತ, ನಿನ್ನ ತಂಗಿಗಿಂತ ಹೆಚ್ಚಿನ ಪಾಪ ನಿನಗೆ ಬಂದಿದೆಯೆಂದು ಹೇಳಬಹುದು.

ಮಾಡಿರುವುದು ಪ್ರಪಂಚ ಸಂಬಂಧವಾದ ತಪ್ಪುಗಳಾದ್ದರಿಂದ ಬಂದಿರುವ ಪಾಪವೂ ಸಹ ಪ್ರಪಂಚ ಸಂಬಂಧವಾದುದೆ. ಆದುದರಿಂದ ಅದು ಎಷ್ಟು ದೊಡ್ಡ ಪಾಪವಾದರೂ ದೈವಜ್ಞಾನದಿಂದ ಕ್ಷಮಾರ್ಹವಾದುದೇ ಎಂದು ಹೇಳಬಹುದು. ಒಂದುವೇಳೆ ಇಲ್ಲಿ ನಮ್ಮ ಜ್ಞಾನಕ್ಕಾಗಲಿ, ದೈವ

ವಿಷಯಗಳಿಗಾಗಲಿ ಏನಾದರೂ ಕಷ್ಟ ನಷ್ಟ ತಂದಿದ್ದರೆ ಕ್ಷಮಿಸಲ್ಪಡದ ಪಾಪ ಬರುತ್ತಿತ್ತು. ಹಾಗೆ ನಡೆಯಲಿಲ್ಲ, ಎಷ್ಟು ವ್ಯಭಿಚಾರ ಮಾಡಿದರೂ, ಗಂಡನನ್ನು ಬಿಟ್ಟು ಹೋದರೂ, ಲಂಚಗಳಿಂದ ಇತರರನ್ನು ಪೀಡಿಸಿದರೂ ಇವೆಲ್ಲವೂ ಪ್ರಪಂಚ ಸಂಬಂಧ ವಿಷಯಗಳೆ ಆಗುತ್ತವೆ. ಆದುದರಿಂದ ಅವುಗಳ ಮೂಲಕ ಬಂದಿರುವ ಪಾಪ ಸಹ ಪ್ರಪಂಚ ಸಂಬಂಧವೇ ಆಗಿರುತ್ತದೆ. ಬಂದಿರುವ ಪಾಪ ಕ್ಷಮಿಸಲಾರದ್ದು ಅಲ್ಲ, ಆದ್ದರಿಂದ ನೀವು ಈಗಲಾದರೂ ದೇವರ ಮೇಲೆ, ದೇವರ ಜ್ಞಾನದ ಮೇಲೆ ಧ್ಯಾಸ ಹೊಂದಿ, ದೇವರ ಜ್ಞಾನದ ಪ್ರಕಾರ ನಡೆದುಕೊಂಡರೆ ಸ್ವಲ್ಪ ಕಾಲಕ್ಕೆ ನೀವು ಮಾಡಿಕೊಂಡ ಕರ್ಮವೆಲ್ಲವೂ ಪೂರ್ತಿಯಾಗಿ ಇಲ್ಲದಂತೆ ಹೋಗುತ್ತದೆ. ದೈವಜ್ಞಾನದಲ್ಲಿರುವ ಶಕ್ತಿ ಮನುಷ್ಯರು ತಿಳಿದೊ, ತಿಳಿಯದೆಯೋ ಮಾಡಿಕೊಂಡ ಪಾಪಗಳನ್ನು ಇಲ್ಲದಂತೆ ಮಾಡಬಲ್ಲದು. ಅಂದರೆ ಜ್ಞಾನವು ಅಗ್ನಿಯಾಗಿ ಪಾಪವೆನ್ನುವ ಕಟ್ಟಿಗೆಗಳನ್ನು ಸುಟ್ಟುಹಾಕುತ್ತದೆ. ಈ ವಿಷಯವೊಂದರ ನಮೂನೆಯನ್ನೆ ಹೊರಗಡೆ ಯಜ್ಞಗಳನ್ನು ಮಾಡಿ ತೋರಿಸುತ್ತಾರೆ. ಯಜ್ಞಕುಂಡದಲ್ಲಿ ಉರಿಯುವ ಅಗ್ನಿ ಜ್ಞಾನ ಎಂದೂ, ಸುಟ್ಟುಹೋಗುವ ಸಮಿಧಗಳು ನಾವು ಸಂಪಾದಿಸಿಕೊಂಡ ಕರ್ಮಗಳೆಲ್ಲವೂ ಅರ್ಥ ಮಾಡಿಕೊಳ್ಳುವಂತೆ ಯಜ್ಞಕ್ರಿಯೆ ಕೊನೆಸಾಗುತ್ತಿದೆ. ಆ ವಿಧವಾಗಿ ಯಜ್ಞ ಸಂಬಂಧವಾಗಿ ಕಾರ್ಯಗಳನ್ನು ಮಾಡಬೇಕೆಂದು ಭಗವದ್ಗೀತೆಯಲ್ಲಿ ಹೇಳುವುದಾಗಿದೆ. ಆ ವಿಷಯವನ್ನು ತಿಳಿಯದವರು ಈಗಲಾದರೂ ತಿಳಿದು, ನೀವು ಮಾಡಿಕೊಂಡ ಪಾಪ ಕರ್ಮಗಳನ್ನು ಜ್ಞಾನಾಗ್ನಿಯಲ್ಲಿ ಸುಟ್ಟುಕೊಳ್ಳಬಹುದು. ಹಾಗೆ ಪಾಪ ವಿಮುಕ್ತಿ ಪಡೆಯಬೇಕೆಂದರೆ, ನೀವು ಮಾಡಿದ ಕೆಟ್ಟದ್ದೆಲ್ಲ ತೊಲಗಬೇಕೆಂದರೆ ಮೊದಲು ನೀವು ದೈವಜ್ಞಾನವನ್ನು ತಿಳಿಯಬೇಕಾಗಿರುತ್ತದೆ.

ಹೆಂಗಸರೆಂಬ ನಾಚಿಕೆಯೂ ಸಹ ಇಲ್ಲದಂತೆ ಆಶ್ರಮಕ್ಕೆ ಬಂದಾಗಲೂ ಸಹ ಮತ್ತುಪಾನೀಯಗಳನ್ನು ಕುಡಿದ ನಿಮಗೆ ನಮ್ಮ ಮಾತುಗಳು ರುಚಿಸುತ್ತವೆನ್ನುವುದು ನಂಬಿಕೆಯಿಲ್ಲ. ಹೇಳಬೇಕಾದ ಕರ್ತವ್ಯ ನಮಗಿದೆ ಆದ್ದರಿಂದ ನಾನು ಹೇಳುವುದಾಗಿದೆ. ಒಂದು ಆಶ್ರಮಕ್ಕೆ ಸ್ವಾಮೀಜಿ ಹತ್ತಿರಕ್ಕೆ ಬಂದಾಗಲೇ ನೀವು ನಿಮ್ಮ ಜೀವನದಲ್ಲಿ ಬದಲಾವಣೆ ತಂದುಕೊಂಡಿದ್ದರೆ ಸುಲಭವಾಗಿ

ದೈವಜ್ಞಾನ ಅರ್ಥವಾಗಿರುತ್ತಿತ್ತು. ನೀವು ಸ್ವಲ್ಪವೂ ಸಹ ಬದಲಾಗಲಿಲ್ಲ, ಆದ್ದರಿಂದ ಈಗ ಬದಲಾವಣೆ ಬರುತ್ತದೆಂದು ನಾವು ಅಂದುಕೊಳ್ಳುವುದಿಲ್ಲ. ಮನುಷ್ಯ ತಪ್ಪುಗಳು ಮಾಡಬಹುದು, ಆದರೆ ಮಾಡಿದ ತಪ್ಪುಗಳನ್ನು ತಿದ್ದುಕೊಳ್ಳುವ ವಿಧಾನವನ್ನು ಸಹ ಮನುಷ್ಯನಿಗೆ ಕೊಡುವುದಾಗಿದೆ. ದೇವರುಕೊಟ್ಟ ಅವಕಾಶವನ್ನು ಕೆಲವರು ವಿನಿಯೋಗಿಸಿಕೊಂಡು ಅವರ ಕರ್ಮಗಳಿಂದ ಹೊರಬೀಳುತ್ತಿದ್ದಾರೆ. ದೇವರ ಜ್ಞಾನ ಮನುಷ್ಯನಿಗೆ ಅರ್ಥವಾದಾಗ ಆತನು ಎಂತಹ ಪಾಪಿಯಾದರೂ, ಅವನ ಪಾಪಗಳು ಕ್ಷಮಿಸಲ್ಪಡುತ್ತವೆಂದು ದೇವರು ಹೇಳಿದ್ದಾನೆ. ನೀವು ಮಾಡಿರುವುದು ಪ್ರಪಂಚ ಪಾಪವೇ ಆಗಿರುವುದರಿಂದ ನೀವು ಪಾಪಕ್ಷಮಾಪಣೆ ಪಡೆಯುವ ಅವಕಾಶ ಇದೆ. ನೀವು ದೇವರ ಜ್ಞಾನ ತಿಳಿದಾಗಲೇ, ನಿಮ್ಮ ಪಾಪಗಳು ದಹಿಸಲ್ಪಡುತ್ತವೆ. ಜ್ಞಾನ ತಿಳಿಯಬೇಕೆಂದರೆ ಜ್ಞಾನದ ಮೇಲೆ ಶ್ರದ್ಧೆ ಇರಬೇಕು. ಶ್ರದ್ಧೆ ಇಲ್ಲದವರಿಗೆ ದೈವಜ್ಞಾನ ಲಭಿಸುವುದಿಲ್ಲ. ಮನುಷ್ಯನಿಗೆ ಶ್ರದ್ಧೆ ಬರಬೇಕೆಂದರೆ ಅದು ಪ್ರಕೃತಿ ಜನಿತವಾದ 'ಮಾಯೆ' ಕೈಯಲ್ಲಿ ಇರುತ್ತದೆ. ಮಾಯೆ ದೇವರಿಗೆ ಅನುಕೂಲವಾದುದು, ಮನುಷ್ಯನಿಗೆ ಪ್ರತಿಕೂಲವಾದುದು, ದೇವರ ಜ್ಞಾನ ಲಭಿಸುವ ಆಶ್ರಮಗಳ ಮೇಲೆ, ಜ್ಞಾನವನ್ನೇ ಬೋಧಿಸುವ ಗುರುಗಳ ಮೇಲೆ ಗೌರವ ಇಲ್ಲದವರಿಗೆ ದೇವರಕಡೆ ಕಳಿಸದಂತೆ ಮಾಯೆ ಆತಂಕಪಡಿಸಬಲ್ಲದು. ಆದುದರಿಂದ ನೀವು ಜ್ಞಾನನಿಲಯವಾದ ಸ್ವಾಮೀಜಿ ಹತ್ತಿರಕ್ಕೆ ಹೋಗಿ, ಅಲ್ಲಿಯೂ ಸಹ ಭಯವಿಲ್ಲದೆ ಕುಡಿದ ನಿಮ್ಮನ್ನು ಮಾಯೆ ದೇವರಕಡೆ ಹೋಗದಂತೆ ಮಾಡಬಲ್ಲದು. ದೇವರ ಜ್ಞಾನದ ಮೇಲೆ ಶ್ರದ್ಧೆ ಉಂಟಾಗದಂತೆ ಮಾಯೆ ಮಾಡುವುದರಿಂದ, ಶ್ರದ್ಧೆ ಇಲ್ಲದವರಿಗೆ ಜ್ಞಾನ ಸಿಗುವುದಿಲ್ಲ. ಜ್ಞಾನ ಉಂಟಾಗದವರ ತಲೆಯಲ್ಲಿ ಜ್ಞಾನಶಕ್ತಿ ಇರುವುದಿಲ್ಲ. ಜ್ಞಾನಶಕ್ತಿ ಇಲ್ಲದ್ದು ನಿಮ್ಮ ಕರ್ಮಗಳು ಸುಡುವುದಿಲ್ಲ. ಆದುದರಿಂದ ನಿಮ್ಮಂತವರು ಜನ್ಮ ಜನ್ಮಕ್ಕು ಜ್ಞಾನಕ್ಕೆ ದೂರವಾಗಿ ಹೋಗುತ್ತಿರುತ್ತಾರೆಂದು ಭಗವದ್ಗೀತೆಯಲ್ಲಿ ದೈವಾಸುರ ಸಂಪದ್ವಿಭಾಗ ಯೋಗದಲ್ಲಿ 19,20 ಶ್ಲೋಕಗಳಲ್ಲಿ ಹೇಳಲ್ಪಟ್ಟಿದೆ. ಇದೆಲ್ಲವೂ ನಿಮ್ಮ ಒಳ್ಳೆಯದನ್ನು ಕೋರಿ ಹೇಳಿದ್ದೇನೆ. ಈಗಲಾದರೂ ನೀವು

ಬದಲಾವಣೆಹೊಂದಿ ದೇವರೇ ದಿಕ್ಕೆಂದು ನಂಬಿದರೆ ಪ್ರಕೃತಿ (ಮಾಯೆ) ನಿಮ್ಮನ್ನು ಆತಂಕಪಡಿಸುವುದಿಲ್ಲ. ಇದಕ್ಕಿಂತ ಹೆಚ್ಚಾಗಿ ಹೇಳಲಾರೆನು.

ಇಂತಿ

***ಆಚಾರ್ಯ ಪ್ರಬೋಧಾನಂದ ಯೋಗೀಶ್ವರರು***

# ನಾಲ್ಕನೇ ಲೇಖ

**ಕರ್ಷಕನಿಗೆ ಅಂದರೆ ವ್ಯಯಸಾಯವನ್ನು ಮಾಡುವವನಿಗೆ...**

ಜೀವಾತ್ಮವಾದ ಸೋಮಯ್ಯ ಎನ್ನುವ ಕರ್ಷಕನಿಗೆ ನಾನು ಬರೆಯುವ ಲೇಖ ಏನೆಂದರೆ!

ನಿಮ್ಮ ಕ್ಷೇಮವೇ ನನ್ನ ಕ್ಷೇಮವಾಗಿ ತಿಳಿದ ನಾನು ನಿಮ್ಮ ಜ್ಞಾನವನ್ನೇ ನನ್ನ ಜ್ಞಾನವಾಗಿ ತಿಳಿಯುತ್ತಾ ನನ್ನಂತೆ ನೀವು ಜ್ಞಾನಿಗಳು ಆಗಬೇಕಂದು ಕೋರುತ್ತಾ ಈ ಉತ್ತರವನ್ನು ಬರೆಯುತ್ತಿದ್ದೇನೆ. ನಿನ್ನ ಹೆಸರು ಸೋಮಯ್ಯ, ನಿನ್ನ ಹೆಸರಿನಲ್ಲಿಯೇ ಜ್ಞಾನವಿದೆ. 'ಸೋಮ್' ಎಂದರೆ 'ಚಂದ್ರ' ಎಂದೂ, 'ಸೋಮ' ಎಂದರೆ 'ಚಂದ್ರನು' ಎನ್ನುವ ಅರ್ಥವಿದೆ. ಚಂದ್ರನು ಎಂದರೆ ಜ್ಞಾನ ಇರುವವನೆಂದು, ಜ್ಞಾನ ನಿಲಯನೆಂದು ಅರ್ಥ. ನಿನ್ನ ಹೆಸರಿಗೆ ತಕ್ಕಂತೆ ನೀನು ಜ್ಞಾನಿಯಾಗಿರಬೇಕೆಂದು ಕೋರುತ್ತಿದ್ದೇನೆ. ನಿನಗೆ ಸೊಮಯ್ಯ ಎನ್ನುವ ಹೆಸರಿದ್ದರೂ ಇಲ್ಲದಿದ್ದರೂ ನೀನು ನಿನ್ನ ವೃತ್ತಿರೀತ್ಯಾ ಕರ್ಷಕನು. **'ಕರ್ಷಕನು'** ಎನ್ನುವ ಪದ ಪೂರ್ವದಲ್ಲಿ **'ಹರ್ಷಕನು'** ಎನ್ನುವ ಪದದಿಂದ ಬದಲಾವಣೆ ಆಗುತ್ತಾ ಬಂದು ಕರ್ಷಕನಾಗಿದೆ. ಚೆನ್ನಾಗಿ ಗಮನಿಸಿದರೆ **"ಕ"** ಎಂಬ ಅಕ್ಷರದಲ್ಲಿನ ಶಬ್ಧದಲ್ಲಿ ಕೊನೆಯದಾಗಿ ಹೇಳುವ ಶಬ್ಧ 'ಅ' ಎಂದೇ ತಿಳಿಯುತ್ತಿದೆ. 'ಕ' ನಲ್ಲಿ 'ಇ' ಇರುವುದರಿಂದ ಕರ್ಷಕನೆಂದರೂ ಹರ್ಷಕನೆಂದರೂ ಒಂದೇಯಾಗುತ್ತದೆ. ಕೃತಯುಗದಲ್ಲಿ 'ಕರ್ಷಕನು' ಎನ್ನುವ ಪದ 'ಹರ್ಷಕನಾಗಿ'ಯೇ ಕರೆಯಲ್ಪಡುತ್ತಿತ್ತು, ಆದ್ದರಿಂದ ಕರ್ಷಕನು ಎನ್ನುವ ಪದಕ್ಕೆ ಅರ್ಥವನ್ನು ಹೇಳಿಕೊಂಡರೆ ಈ ವಿಧವಾಗಿ ಇದೆ.

**'ಹರ್ಷ' ಎಂದರೆ 'ಆನಂದ'** ಎಂದು ಅರ್ಥ. 'ಹರ್ಷಕನು' ಎಂದರೆ ಸಂತೋಷ ಇರುವವನು' ಎಂದು ಹೇಳಬಹುದು. ಈದಿನ ಕರ್ಷಕನು ಎಂದು ಕರೆಯಲ್ಪಟ್ಟರೂ ಅರ್ಥ ಮಾತ್ರ ಹರ್ಷಕನಾಗಿಯೇ ಹೇಳಿಕೊಳ್ಳಬೇಕಾಗಿರುತ್ತದೆ. ಪೂರ್ವದಲ್ಲಿ ಪ್ರತಿ ಕರ್ಷಕನು ಹರ್ಷವನ್ನು ಹೊಂದುವವನಾಗಿಯೇ ಇರುತ್ತಿದ್ದನು. ಕರ್ಷಕನು ಸಂತೋಷವಾಗಿ ಇರುವುದಕ್ಕೆ ಕಾರಣ 'ಅವನಿಗೆ ಸಿಗುವ ಸಹಾಯ' ಎಂದೇ ಹೇಳಬಹುದು. ಪ್ರತಿ ಕರ್ಷಕನಿಗು ದೇವರಿಂದ ಪ್ರತಿ ವರ್ಷ ಸಹಾಯ ಇರುತ್ತಿತ್ತು. ಆಗ ತಿಂಗಳಿಗೆ ಮೂರು ಮಳೆಗಳು ಸುರಿಯುತ್ತಿದ್ದವು. ವರ್ಷಕ್ಕೆ ಎರಡು ಬೆಳೆಗಳು ಬೆಳೆಯುತ್ತಿದ್ದರು. ಬೆಳೆಗಳಲ್ಲಿ ವಿಪರೀತವಾದ ಸಹಾಯ ಸಿಗುತ್ತಿತ್ತು. ಮೊದಲು ರೈತನು ತನ್ನ ಕಾಳುಗಳನ್ನು ಹೊಲದಲ್ಲಿ ಚೆಲ್ಲಿ ಖರ್ಚು ಮಾಡುತ್ತಾನೆ. ತನ್ನ ಕಾಳುಗಳನ್ನು ಮಣ್ಣಿನಲ್ಲಿ ಬಿತ್ತನೆ ಮಾಡಿದರೆ ಅದನ್ನು ಖರ್ಚು ಎನ್ನುತ್ತಿದ್ದೇವೆ ಅಲ್ಲವೆ! ಖರ್ಚನ್ನು 'ವ್ಯಯ' ಎನ್ನುವ ಪದದಿಂದ ಹೇಳಬಹುದು. ಹಾಗೆ ವ್ಯಯ ಮಾಡಿದ ನಂತರ ಮೂರು ತಿಂಗಳಿಗೆ ಅವೇ ಕಾಳುಗಳು ಬೆಳೆರೂಪದಲ್ಲಿ ಪುನಃ ಎಷ್ಟೋಪಾಲು ಹೆಚ್ಚಾಗಿ ಬರುವುದರಿಂದ ಅದನ್ನು ದೇವರು ಮಾಡಿದ ಸಹಾಯ ಅಥವಾ ಸಾಯ ಎಂದು ಕರೆಯುತ್ತಿದ್ದೇವೆ. ಒಬ್ಬ ರೈತನು ಮೊದಲು ತನ್ನ ಕಾಳುಗಳನ್ನು ಖರ್ಚುಮಾಡಿ ನಂತರ ಲಾಭವನ್ನು ಸಹಾಯ ರೂಪದಲ್ಲಿ ಪಡೆಯುತ್ತಿದ್ದಾನೆ, ಆದ್ದರಿಂದ ಆ ವ್ಯವಹಾರ ಎಲ್ಲವನ್ನು ಸೇರಿಸಿ 'ವ್ಯಯಸಾಯ' ಎಂದು ಕರೆದಿದ್ದಾರೆ. ವ್ಯಯ ಮಾಡಿದ ಪ್ರತಿಯೊಬ್ಬನು ಸಾಯ ಹೊಂದುವುದರಿಂದ ಪ್ರತಿ ರೈತನು ಸಂತೋಷವಾಗಿ ಇರುತ್ತಿದ್ದನು. ಸಂತೋಷವಾಗಿ ಇರುವುದರಿಂದ ಪ್ರತಿ ರೈತನನ್ನು 'ಹರ್ಷಕನು' ಎಂದು ಹೇಳಿದ್ದಾರೆ. ಆ ಪದವೇ ಈದಿನ 'ಕರ್ಷಕನಾ'ಗಿ ಹೇಳಲ್ಪಡುತ್ತಿದೆ.

ಕಾಲಕ್ರಮವಾಗಿ ಕರ್ಷಕನಾಗಿ ಬದಲಾದ ಹರ್ಷಕನು ತನ್ನ ಹೆಸರಿಗೆ ತಕ್ಕಂತೆ ಸಂತೋಷವಾಗಿ ಇರಬೇಕಾದವನು ಹಾಗೆ ಇಲ್ಲದಂತೆ ಹೋಗುವುದಕ್ಕೆ ತೆರೆಹಿಂದೆ ಕಾರಣ ಕರ್ಮವೇಯೆಂದು ಹೇಳಬಹುದು. ಪೂರ್ವದಲ್ಲಿ ರೈತನಾಗಿರುವವನು ಒಳ್ಳೆಯ ಬೆಳೆಗಳ ಲಾಭ ಪಡೆಯುತ್ತಿರುವುದರಿಂದ ದೇವರು ಮಾಡಿದ ಸಹಾಯಕ್ಕೆ ಸಂತೋಷವಾಗಿ ಇರುತ್ತಾ ಇತರ ಪಾಪ ಬರುವ ಕೆಲಸಗಳು

ಮಾಡುವವನು ಅಲ್ಲ. ಯಾವಾಗಲೂ ಸಂತೋಷವಾಗಿ ಇರುವುದರಿಂದ ರೈತನು ಒಳ್ಳೆಯ ಕೆಲಸಗಳೇ ಮಾಡುತ್ತಿದ್ದನು. ಇತರರಿಗೆ ಒಳ್ಳೆಯದನ್ನು ಮಾಡುವವನಾಗಿ ಪೂರ್ವದಲ್ಲಿ ರೈತರಿರುವುದರಿಂದ ರೈತನಿಗೆ ಪುಣ್ಯವೇ ಬರುತ್ತಿತ್ತು, ಕಲಿಯುಗ ಬಂದ ನಂತರ ರೈತನಾದ ಕರ್ಷಕನು ಗುಣಗಳ ಪ್ರಭಾವದಿಂದ ಕಠಿಣವಾಗಿ ಬದಲಾಗಿಹೋಗಿ ಇತರರ ಉದ್ಧರಿಸುವವನು ಅಲ್ಲದೆ ಇತರರನ್ನು ಬಾಧಿಸುವ ವನಾಗಿ ಬದಲಾಗಿದ್ದಾನೆ. ಇತರರನ್ನು ಬಾಧಿಸುವುದರಿಂದ ರೈತನು ಸಹ ಪಾಪದಿಂದ ಕೂಡಿಕೊಂಡವನಾಗಿದ್ದಾನೆ.

ಕಲಿಯುಗದಲ್ಲಿ ಮಳೆಗಳು ಬರುವುದು ಕಡಿಮೆಯಾಗಿವೆ. ಅದರಿಂದ ಅಲ್ಲಲ್ಲಿ ಕೆಲವುಕಡೆ ಮಾತ್ರ ಬರಗಾಲದ ಛಾಯೆಗಳು ಕಾಣಿಸುತ್ತಿದ್ದವು. ಬರಗಾಲ ಬಂದ ಪ್ರಾಂತಗಳಲ್ಲಿರುವ ರೈತರು ಪ್ರಸ್ತುತಕ್ಕೆ ಹೊಲದ ಕೆಲಸ ನಿಲ್ಲಿಸಿ ಇತರ ಕೆಲಸಗಳ ಮೇಲೆ ಆಧಾರಪಡುತ್ತಿದ್ದರು. ಹಾಗೆ ಇತರ ಕೆಲಸಗಳು ಮಾಡುವುದರಲ್ಲಿ ತನ್ನ ಆದಾಯಕ್ಕಾಗಿ ಕೆಲವು ಪಾಪದ ಕೆಲಸಗಳನ್ನೇ ಮಾಡಬೇಕಾಗಿ ಬರುತ್ತಿದೆ. ಬೆಳೆ ಬೆಳೆಯದಿರುವಾಗ ರೈತನು ಇತರ ಮಾರ್ಗದಲ್ಲಿ ತನಗೆ ಲಾಭ ಬರುವಂತೆ ಮಾಡಿಕೊಳ್ಳುವುದರಿಂದ, ತಾನು ಮಾಡುವ ಕೆಲಸಗಳಲ್ಲಿ ಕೆಲವು ಕೆಲಸಗಳು ಇತರರ ಹಣವನ್ನು ಸೆಳೆದುಕೊಳ್ಳುವಂತೆ, ತನಗೆ ಲಾಭ ಬರುವಂತೆ ಇರುವುದರಿಂದ ಅದು ಪಾಪದ ಕೆಲಸವೇ ಆಗುತ್ತಿದೆ. ದೇವರು ಕೊಡುವ ಸಹಾಯ ಇಲ್ಲದಿರುವಾಗ ಅಂದರೆ ವ್ಯಯಸಾಯ ಇಲ್ಲದಿರುವಾಗ, ಇತರ ವ್ಯಾಪಕವಾದ ಕೆಲಸಗಳನ್ನು ಮಾಡಬೇಕಾಗಿರುವುದರಿಂದ, ಆ ಕೆಲಸಗಳು ಇತರರ ಒಡವೆಯನ್ನು ದೊಚು ಕೊಳ್ಳುವಂತಿರುವುದರಿಂದ, ಅವುಗಳಿಂದ ಪಾಪವೆ ಬರುತ್ತಿದೆ. ಈ ವಿಧವಾಗಿ ರೈತ ಪಾಪ ಕಾರ್ಯಗಳಲ್ಲಿ ಇರುವುದರಿಂದ ಪಾಪವೇ ಪುನಃ ಅನುಭವಕ್ಕೆ ಬಂದು, ರೈತ ಕಷ್ಟಗಳನ್ನೇ ಅನುಭವಿಸಬೇಕಾಗಿದೆ. ರೈತ ಪಾಪವನ್ನು ಅನುಭವಿಸ ಬೇಕೆಂದರೆ ಆತನಿಗೆ ಸಹಾಯ ಸಿಗಬಾರದು. ಆದುದರಿಂದ ಈದಿನ ಬೆಳೆಗಳು ಬೆಳೆಯುತ್ತಿಲ್ಲ. ರೈತನು ಸುಖವಾಗಿ ಇರುತ್ತಿಲ್ಲ. ಹರ್ಷಕನು ಎನ್ನುವ ಹೆಸರು ರೈತನಿಗೆ ಅನ್ವಯಿಸುತ್ತಿಲ್ಲ. ಈದಿನ ರೈತ ಎನ್ನುವ ಕರ್ಷಕನು ಪಾಪಫಲಿತದಿಂದ ಹರ್ಷಕನಾಗಿ ಇರಲಾಗದೆ ಕರ್ಷಕನಾಗಿಯೇ ಉಳಿದುಹೋಗಿದ್ದಾನೆ. ಹರ್ಷಕನು

ಕರ್ಷಕನಾಗಿ ಬದಲಾದಂತೆ ‘ವ್ಯಯಸಾಯ’ ಎನ್ನುವ ಪದ ‘ವ್ಯವಸಾಯವಾಗಿ’ ಬದಲಾಗಿದೆ. ಹರ್ಷಕನು ಸ್ಥಾನದಲ್ಲಿ ‘ಹ’ ಗೆ ಬದುಲು ‘ಕ’ ಎನ್ನುವ ಅಕ್ಷರ ಬರುವಂತೆ ವ್ಯಯಸಾಯ ಎನ್ನುವ ಪದದಲ್ಲಿ ’ಯ’ ಎನ್ನುವ ಅಕ್ಷರವು ಹೋಗಿ ’ವ’ ಬಂದು ಸೇರಿ ’ವ್ಯಯಸಾಯವು’ ಎನ್ನುವ ಪದದ ಬದಲು ‘ವ್ಯವಸಾಯವು’ ಎನ್ನುವ ಪದವು ಬಂದಿದೆ. ಈದಿನ ವ್ಯಯಸಾಯ ಎಂಬ ಪದದ ಬದಲು ವ್ಯವಸಾಯ ಎನ್ನುವ ಅರ್ಥವಿಲ್ಲದ ಮಾತನ್ನು ಹೇಳುತ್ತಿದ್ದೇವೆಂದು ಬಹಳಜನ ರೈತರಿಗೆ ತಿಳಿಯದಂತೆ ಹೋಗಿದೆ.

ಮರ್ಯಾದೆ ಸೋಮಯ್ಯಾ! ನೀನು ಮಾಡುವುದು ವ್ಯಯಸಾಯವಾ, ವ್ಯವಸಾಯವಾ? ಎಂದು ಪ್ರಶ್ನಿಸಿದರೆ ಜವಾಬು ಹೇಳಲಾರದ ಪರಿಸ್ಥಿತಿ ಏರ್ಪಡುತ್ತಿದೆ. ಈಗಿನಕಾಲದಲ್ಲಿ ವ್ಯವಸಾಯವೇ ಎಂದು ಎಲ್ಲರೂ ಕರೆಯುತ್ತಿದ್ದೇವೆ ಹೊರತು “ವ್ಯಯಸಾಯ” ಎಂದು ಯಾರೂ ಕರೆಯುತ್ತಿಲ್ಲ. ಆದುದರಿಂದ ನಿನಗೆ ತಿಳಿಯದಂತೆ ಹೋಗಿರುವ ‘ವ್ಯಯಸಾಯ’ ಎನ್ನುವ ಪದಕ್ಕೆ ಅರ್ಥ ತಿಳಿಯುವಂತೆ ಮತ್ತು ‘ಹರ್ಷಕನು’ ಎನ್ನುವ ಪದಕ್ಕೆ ವಿವರ ತಿಳಿಯುವಂತೆ ಈ ಉತ್ತರವನ್ನು ಬರೆಯುತ್ತಿದ್ದೇನೆ. ಈ ಉತ್ತರದಲ್ಲಿ ನೀನು ಉತ್ತರದಕಡೆ ಹೋಗುವಂತೆ ಮಾಡುವುದೆ ನಮ್ಮ ಉದ್ದೇಶವಾಗಿರುವುದರಿಂದ ಗತದಲ್ಲಿ ನೀನು ಮಾಡಿದ ಪಾಪದ ಕೆಲಸಗಳನ್ನು ಎತ್ತಿ ತೋರಿಸಿ, ನಂತರ ಅಂತಹ ಪಾಪವನ್ನು ಮಾಡದಂತೆ ಒಳ್ಳೆಯ ಮಾರ್ಗದಲ್ಲಿ ಹೋಗುವಂತೆ ಒಳ್ಳೆಯ ಸೂಕ್ತಿಗಳನ್ನು ಬೋಧಿಸುವುದೇ ಈ ಲೇಖದಲ್ಲಿನ ಸಾರಾಂಶ.

ನಿಮ್ಮ ಮನೆ ಹೆಸರು ಮರ್ಯಾದೆ, ನಿನ್ನ ಹೆಸರು ಸೋಮಯ್ಯ, ಆದರೆ ನಿನ್ನ ಮನೆ ಹೆಸರಿಗೆ ತಕ್ಕಂತೆ ನೀನು ಹೊರಗಿನ ಪ್ರಪಂಚದಲ್ಲಿ ಮರ್ಯಾದೆ ಸಂಪಾದಿಸಿಕೊಳ್ಳಲಿಲ್ಲ. ಹಾಗೆ ನಿನ್ನ ಹೆಸರಿಗೆ ತಕ್ಕಂತೆ ಜ್ಞಾನಕ್ಕೆ ಸಂಬಂಧ ಇಲ್ಲದಂತೆ ಬದುಕಿದ್ದೀಯಾ. ಮನೆ ಹೆಸರು ಗೌರವಪ್ರದವಾದುದು, ನಿನ್ನ ಹೆಸರು ಜ್ಞಾನವಂತವಾದುದು. ಆದರೂ ನಿನ್ನ ಜೀವನ ಅಗೌರವವಾಗಿ, ಅಜ್ಞಾನವಾಗಿ ಸಾಗಿದೆ. ನಿನ್ನ ಚಿಕ್ಕಂದಿನಲ್ಲಿಯೇ ನಿನ್ನ ತಂದೆ ಮರಣಿಸಿದ್ದಾನೆ. ಆಗಲೇ ನಿನಗೆ

ನಾಲ್ಕುಜನ ತಮ್ಮಂದಿರಿದ್ದಾರೆ. ನಿಮ್ಮ ತಂದೆ ಮರಣಿಸಿದ ನಂತರ ನಿಮ್ಮ ತಾಯಿಯವರು ಎಷ್ಟೋ ಶ್ರಮಪಟ್ಟು ನಿಮ್ಮನ್ನು ಪೋಷಿಸಿದ್ದಾಳೆ. ನಿಮ್ಮ ಊರಿನಲ್ಲಿ ಎಲ್ಲರೂ ಒಳ್ಳೆಯ ಹೊಲಗಳಿರುವ ರೈತರೇ ಇದ್ದಾರೆ. ನಿಮ್ಮದು ಚಿಕ್ಕ ಗ್ರಾಮ. ನಿಮ್ಮ ಊರಿನಲ್ಲಿ ನಿನ್ನ ಚಿಕ್ಕಂದಿನಲ್ಲಿ ಸುಮಾರು ಐವತ್ತರಿಂದ ಆರವತ್ತು ಮನೆಯವರೆಗು ಇದ್ದವು. ಕೇವಲ ಹತ್ತು ಕುಟುಂಬದವರಿಗೆ ಮಾತ್ರ ನೂರು ಎಕರೆಗಳಿಗಿಂತ ಕಡಿಮೆ ಭೂಮಿ ಇದೆ. ಉಳಿದವರಿಗೆಲ್ಲಾ ನೂರರಿಂದ ಹೆಚ್ಚು ಎಕರೆಗಳ ಭೂಮಿಯಿದೆ. ನಿಮ್ಮ ಕುಟುಂಬಕ್ಕೆ ಮಾತ್ರ ಕೇವಲ ಇಪ್ಪತ್ತು (20) ಎಕರೆಗಳ ಭೂಮಿ ಮಾತ್ರ ಇತ್ತು. ನೀನು ಬೆಳೆದು ದೊಡ್ಡವನಾದ ನಂತರ ನಿನ್ನ ಮದುವೆ ಆಗದಮೊದಲೆ ನಿಮ್ಮ ತಾಯಿಸಹ ಮರಣಿಸಿದ್ದಾಳೆ. ಆಗ ನಿನ್ನ ಚಿಕ್ಕ ತಮ್ಮನ ವಯಸ್ಸು 14 ವರ್ಷಗಳು. ಮನೆಯಲ್ಲಿ ನೀನೇ ದೊಡ್ಡವನಾಗಿರುವು ದರಿಂದ ಎಲ್ಲಾ ನಿನ್ನ ಅಧಿಕಾರವೇ ನಡೆಯುತ್ತಿತ್ತು. ನೀನು ಹೆಚ್ಚಾಗಿ ಉಳಿದ ನಾಲ್ಕುಜನ ತಮ್ಮಂದಿರಿಂದ ಕೆಲಸ ಮಾಡಿಸುವವನು. ನಿನ್ನ ಚಿಕ್ಕ ತಮ್ಮ ಕೆಲಸಮಾಡದೆ ಸುಸ್ತಾಗುತ್ತಿದ್ದನು. ಹುಡುಗನೆಂದು, ಅಷ್ಟೇಅಲ್ಲದೆ ತಮ್ಮನೆಂದು ದಯೆ ಇಲ್ಲದೆ ಕೆಲಸ ಮಾಡದಿದ್ದರೆ ಅನ್ನವು ಸಹ ನೀನು ಇಡುವವನು ಅಲ್ಲ. ನೀನು ಕಠಿಣವಾಗಿ ನೋಡುವುದರಿಂದ ನಾಲ್ಕುಜನ ತಮ್ಮಂದಿರು ಬಹಳ ದುಃಖಪಡುತ್ತಿದ್ದರು. ಒಂದು ವರ್ಷ ಬಾಧೆಗಳು ಬಿದ್ದು ನಿನ್ನ ಚಿಕ್ಕ ತಮ್ಮನು ಮನೆಬಿಟ್ಟು ಓಡಿಹೋಗಿದ್ದಾನೆ. 15 ವರ್ಷಗಳ ವಯಸ್ಸಿನಲ್ಲಿ ಓಡಿಹೋದ ನಿನ್ನ ತಮ್ಮನನ್ನು ಕುರಿತು ನೀನು ಯಾವ ಮಾತ್ರ ಹುಡುಕಲಿಲ್ಲ. ಹೋದವನು ಪುನಃ ಮನೆಗೆ ಬರಲಿಲ್ಲ. ಆಗ ಮೂವರು ತಮ್ಮಂದಿರೆ ಉಳಿದಿದ್ದಾರೆ. ನಿನ್ನೊಂದಿಗೆ ಸೇರಿ ನಾಲ್ಕುಜನರಾಗಿದ್ದಾರೆ. ಮೊದಲು ಐದುಜನರಿರುವುದರಿಂದ ನಿಮಗಿರುವ 20 ಎಕರೆಗಳ ಭೂಮಿಯನ್ನು ಹಂಚಿಕೊಂಡರೆ ಎಲ್ಲರಿಗೂ ನಾಲ್ಕು ಎಕರೆಗಳು (4) ಬರುವುದು. ಈಗ ಒಬ್ಬನು ಮನೆಬಿಟ್ಟು ಹೋಗಿರುವುದರಿಂದ ಒಬ್ಬೊಬ್ಬರಿಗೆ ಐದು (5) ಎಕರೆಗಳು ಬರುವ ಅವಕಾಶ ಇದೆಯೆಂದು, ಚಿಕ್ಕತಮ್ಮನು ಹೋಗಿದ್ದೆ ಒಳ್ಳೆಯದೆಂದು ತಿಳಿದುಕೊಂಡಿದ್ದೀಯಾ. ಉಳಿದ ಮೂವರು ತಮ್ಮಂದಿರಲ್ಲಿ ಒಬ್ಬನು ತಿಳುವಳಿಕೆ ಇಲ್ಲದವನು. ಒಬ್ಬನು ಒಳ್ಳೆಯ ಶರೀರದಾರುಢ್ಯ ಇರುವವನು.

ಒಬ್ಬನು ಒಳ್ಳೆಯ ತಿಳುವಳಿಕೆ ಇರುವವನು. ನಿನ್ನ ತಮ್ಮಂದಿರಲ್ಲಿ ನಾಲ್ಕನೇ ತಮ್ಮ ಓಡಿಹೋದರೆ ಮೂರನೆ ತಮ್ಮನು ಶರೀರ ಧಾರುಢ್ಯ ಇರುವವನು ಎಲ್ಲರಿಗಿಂತ ಚೆನ್ನಾಗಿ ಕೆಲಸ ಮಾಡುವವನು. ಮೂರನೆ ತಮ್ಮನು ಚೆನ್ನಾಗಿ ಕೆಲಸಮಾಡುತ್ತಿದ್ದಾನೆಂದು ತಿಳಿದುಕೊಳ್ಳದಂತೆ, ಅವನು ಸಹ ಇಲ್ಲದಂತೆ ಹೋದರೆ ಆತನ ಭೂಮಿ ನನ್ನ ಭಾಗಕ್ಕೆ ಬರುತ್ತದೆ ಅಲ್ಲವೆ! ಎಂದು ನೀನು ಆಲೋಚಿಸಿದ್ದೀಯಾ. ಸ್ವಲ್ಪಮಟ್ಟಿನ ಆಸ್ತಿಗಾಗಿ ನಿನ್ನಲ್ಲಿ "ಆಸೆ" ಎನ್ನುವ ಗುಣ ಹೆಚ್ಚಾಗಿ, ಅದಕ್ಕೆ ಜೊತೆಯಾಗಿ 'ಅಸೂಯೆಯೂ' ಸಹ ಜೊತೆಯಾಗಿ ನಿನ್ನಲ್ಲಿ ಬುದ್ಧಿ ಪೂರ್ತಿ ಕೆಟ್ಟ ಯೋಚನೆಗಳನ್ನು ಮಾಡಲು ಮೊದಲುಮಾಡಿದೆ.

ಇದಕ್ಕು ಮೊದಲು ಒಬ್ಬ ತಮ್ಮನನ್ನು ಅನ್ಯಾಯವಾಗಿ ಮನೆಬಿಟ್ಟು ಹೋಗುವಂತೆ ಮಾಡಿರುವೆ. ನೀನು ನಿನ್ನ ತಿಳುವಳಿಕೆಯಿಂದ ಮಾಡಿದ್ದೇನೆಂದು ಅಂದುಕೊಳ್ಳುವುದರಿಂದ ನಿನ್ನ ತಮ್ಮನನ್ನು ಓಡಿಹೋಗುವಂತೆ ಮಾಡಿದ ಪಾಪ ನಿನ್ನನ್ನು ಸೇರಿದೆ. ಸಾಧಾರಣವಾಗಿ ಬರುವ ಆಸ್ತಿಗಿಂತ ನಿನ್ನ ತಮ್ಮ ಹೋಗಿರುವುದರಿಂದ ಒಂದು ಎಕರೆ ಭೂಮಿ ಹೆಚ್ಚಾಗಿ ಬರುತ್ತದೆಂದು ತಿಳಿದಿರುವೆ. ಒಂದು ಎಕರೆ ಕಾಣಿಸುವುದಾದರೂ, ಕಾಣಿಸದ ಪಾಪ ನಿನ್ನ ಭಾವವನ್ನನುಸರಿಸಿ ನೂರು ಎಕರೆಗಳಷ್ಟು ಬಂದಿದೆಯೆಂದು ನಿನಗೆ ತಿಳಿದಿಲ್ಲ. ಕಾಣಿಸುವುದನ್ನು ನೋಡಿ ನೀನು ಸಂತೋಷಪಟ್ಟಿದ್ದೀಯಾ. ಕಾಣಿಸದ ಫಲಿತದಿಂದ ಎಷ್ಟೊ ಬಾಧೆಪಡಬೇಕಾಗಿರುತ್ತದೊ ನಿನಗೆ ತಿಳಿದಿಲ್ಲ. ಈಗಾಗಲೇ ಎಷ್ಟೋ ಪಾಪ ಇರುವಾಗ ಹೊಸದಾಗಿ ಮತ್ತೊಂದು ಪಾಪ ಮಾಡಲು ಮೊದಲು ಮಾಡಿರುವೆ. ಮೂರನೆ ತಮ್ಮನನ್ನು ಹೇಗಾದರೂ ಇಲ್ಲದಂತೆ ಮಾಡಬೇಕೆಂದುಕೊಂಡಿದ್ದೀಯಾ. ಕೊನೆಗೆ ಆತನನ್ನು ಸಾಯಿಸಬೇಕೆನ್ನುವ ದುಷ್ಟಬುದ್ಧಿ ನಿನ್ನಲ್ಲಿ ಬಂದಿದೆ. ಎಷ್ಟೋ ತಿಳುವಳಿಕೆಯಿಂದ ತೆಂಗಿನಕಾಯಿ ತಿರ್ಥದಲ್ಲಿ ವಿಷವನ್ನು ಬೆರೆಸಿ ಕೊಟ್ಟಿರುವೆ. ಪೂಜೆಯಲ್ಲಿ ಬಂದಿರುವ ದೇವರ ಪ್ರಸಾದವಾಗಿ ತಿರ್ಥವನ್ನು ತೆಗೆದುಕೊಂಡ ನಿನ್ನ ಮೂರನೆ ತಮ್ಮನು ಮರಣಿಸಿದ್ದಾನೆ. ಯಾವುದೊ ರೋಗದಿಂದ ಸತ್ತುಹೋಗಿದ್ದಾನೆಂದು ಎಲ್ಲರಿಗೂ ಪ್ರಚಾರ ಮಾಡಿರುವೆ. ಹೀಗೆ ಹತ್ಯಾಪಾಪ ನಿನ್ನನ್ನು ಸುತ್ತುವರೆದಿದೆ. ಸ್ವಲ್ಪ ಆಸ್ತಿಗೋಸ್ಕರ ನೀಚಾತಿನೀಚವಾಗಿ ಒಂದು

ತಾಯಿಗೆ ಹುಟ್ಟಿದ್ದೇವೆನ್ನುವ ಸೌಜನ್ಯವೂ ಕೂಡಾ ಇಲ್ಲದಂತೆ, ಜಂತುಗಳಿಗಿಂತ ನೀಚವಾಗಿ ಪ್ರವರ್ತಿಸಿ ಸ್ವಂತ ತಮ್ಮನನ್ನೇ ಸಾಯಿಸಿದ ಪಾಪಾತ್ಮನು ನೀನು. ನೀನು ಎಷ್ಟು ನೀಚನೊ ಇತರರಿಗೆ ತಿಳಿದಿಲ್ಲ.

ಮೂರನೆ ತಮ್ಮನನ್ನು ಸಾಯಿಸಿದ ನಂತರ ನಿನ್ನ ನಿಜರೂಪ ತಿಳಿಯದೆ ಯಾರೋ ಹುಡುಗಿಯನ್ನು ಕೊಟ್ಟರೆ ನಿನಗೆ ಮದುವೆಯಾಗಿದೆ. ಆಗಿನಕಾಲದಲ್ಲಿ ಹೆಣ್ಣುಮಕ್ಕಳು ಸಿಗದೆ ಬಹಳಜನ ಮದುವೆಯಾಗದವರಾಗಿ ಇರುತ್ತಿದ್ದರು. ನಿನ್ನ ಅದೃಷ್ಟದಂತೆ ಒಳ್ಳೆಯ ಹುಡುಗಿಯೇ ದೊರೆತಿದ್ದಾಳೆ. ನೀನು ಒಬ್ಬನೆ ನಿಧಾನವಾಗಿ ಮದುವೆ ಮಾಡಿಕೊಂಡಿದ್ದೀಯಾ. ಆದರೆ ನಿನ್ನ ಉಳಿದ ಇಬ್ಬರು ತಮ್ಮಂದಿರಿಗೆ ಮದುವೆ ಮಾಡಬೇಕೆನ್ನುವ ಪ್ರಯತ್ನವು ನೀನು ಮಾಡಲಿಲ್ಲ. ಉಳಿದ ಇಬ್ಬರು ತಮ್ಮಂದಿರಲ್ಲಿ ಮೊದಲ ತಮ್ಮನು ತಿಳುವಳಿಕೆಯುಳ್ಳವನು. ಎರಡನೆಯವನು ತಿಳುವಳಿಕೆ ಇಲ್ಲದವನು. ನಂತರ ನಿನ್ನ ಎರಡನೆ ತಮ್ಮನ ಮೇಲೆ ದೃಷ್ಟಿ ಸಾರಿದೆ. ನಿಮ್ಮ ಊರಿನೊಳಗೆ ಬಂದಿರುವ ಒಬ್ಬ ಸಾಧುವನ್ನು ನಿಮ್ಮ ಮನೆಗೆ ಬರುವಂತೆ ಮಾಡಿಕೊಂಡಿರುವೆ. ಆ ಸಾಧುವಿನೊಂದಿಗೆ ಚೆನ್ನಾಗಿ ಪರಿಚಯ ಏರ್ಪಟ್ಟ ನಂತರ ನಿನ್ನ ಎರಡನೆ ತಮ್ಮನನ್ನು ಸಾಧುವಿಗೆ ಶಿಷ್ಯನನ್ನಾಗಿ ಮಾಡಿರುವೆ. ಒಬ್ಬಂಟಿಗನಾಗಿ ತಿರುಗುತ್ತಿರುವ ಸಾಧುವಿಗೆ ಶಿಷ್ಯನು ದೊರೆತಿರುವುದಕ್ಕೆ ಸಂತೋಷವಾಗಿದೆ. ನಂತರ ಸ್ವಲ್ಪ ಕಾಲಕ್ಕೆ ಗುರುವಿನೊಂದಿಗೆ ಶಿಷ್ಯನೆನ್ನುವಂತೆ ಎರಡನೆ ತಮ್ಮನು ಸಹ ಸಾಧುವಿನಹಿಂದೆ ಹೋಗುವುದು ನಡೆದಿದೆ. ಮನೆಯ ಹತ್ತಿರ ಕೆಲಸ ಮಾಡುವುದಕ್ಕಿಂತ ಗುರುವಿನ ಹತ್ತಿರ ಇದ್ದರೆ ಕೆಲಸ ಮಾಡದಿದ್ದರೂ ಊಟ ದೊರೆಯುತ್ತದೆಂದು ತಿಳಿದ ತಿಳುವಳಿಕೆ ಇಲ್ಲದವನು ಇದೇ ಶ್ರೇಯಸ್ಕರ ವೆಂದು ಸಾಧುವಿನ ಹಿಂದೆ ಹೋಗಿದ್ದಾನೆ. ಅಲ್ಲಿಗೆ ನಿನ್ನ ಹತ್ತಿರ ಮೊದಲನೆ ತಮ್ಮನು ಮಾತ್ರ ಉಳಿದಿದ್ದಾನೆ.

ಇಬ್ಬರು ಇದ್ದರೂ ಆಸ್ತಿಯನ್ನು ಹಂಚಿಕೊಂಡರೆ ಒಬ್ಬೊಬ್ಬರಿಗೆ ಹತ್ತು ಎಕರೆಗಳ ಭೂಮಿ ಬರುತ್ತದೆ. ಆದರೆ ನಿನ್ನ ಬುದ್ಧಿ ಕೆಟ್ಟ ಯೋಚನೆ ಮಾಡಿರುವು ದರಿಂದ ಮೊದಲ ತಮ್ಮನು ಸಹ ಇಲ್ಲದಂತಾದರೆ ಭೂಮಿ ಎಲ್ಲಾ ನನಗೊಬ್ಬನಿಗೆ ಬರುತ್ತದೆಂದು ತಿಳಿದುಕೊಂಡಿದ್ದೀಯಾ. ಆಗಿನ ಕಾಲದಲ್ಲಿ ಭಾರತದೇಶದಲ್ಲಿ

ಬ್ರಿಟಿಷ್ ಪರಿಪಾಲನೆ ಸಾಗುತ್ತಿತ್ತು. ಸೈನಿಕರಿಗಾಗಿ ಸೈನಿಕಾಧಿಕಾರಿಗಳೇ ಹಳ್ಳಿಗಳಿಗೆ ಬಂದು ಮಿಲಿಟರಿಗೆ ಸೈನಿಕರನ್ನಾಗಿ ಸೇರಿಸಿಕೊಳ್ಳುತ್ತಿದ್ದರು. ಕೆಲವುಕಡೆ ಬರುವುದಿಲ್ಲ ವೆಂದು ಹೇಳಿದವರನ್ನು ಬಲವಂತವಾಗಿ ಕೂಡಾ ಕರೆದುಕೊಂಡು ಹೋಗುತ್ತಿದ್ದರು. ಒಂದು ದಿನ ಮಿಲಿಟರಿ ಅಧಿಕಾರಿಗಳು ನಿಮ್ಮ ಊರಿನೊಳಗೆ ಸೈನಿಕರ ಸೆಲಕ್ಷನ್‌ಗೆ ಬಂದು ಕಣ್ಣಿಗೆ ದೃಢಕಾಯವಾಗಿ ಕಾಣಿಸಿದವರೆಲ್ಲರನ್ನು ಬಲವಂತವಾಗಿ ಸೈನ್ಯದಲ್ಲಿ ಸೇರಿಸಿಕೊಳ್ಳುತ್ತಿದ್ದರು. ಅದೇ ಸರಿಯಾದುದೆಂದು ಭಾವಿಸಿದ ನೀನು ನಿನ್ನ ತಮ್ಮನನ್ನು ಸೈನ್ಯದೊಳಗೆ ಹೋಗುವಂತೆ ಮಾಡಿರುವೆ. ಮಿಲಟರಿ ಅಧಿಕಾರಿಗಳಿಗೆ ನಿನ್ನ ತಮ್ಮನನ್ನು ತೋರಿಸುವುದರಿಂದ ಅವರು ಆತನನ್ನು ಕರೆದುಕೊಂಡುಹೋಗಿದ್ದಾರೆ. ಹೀಗೆ ಮೊದಲ ತಮ್ಮನನ್ನು ಸಹ ಅಲ್ಲಿ ಇಲ್ಲದಂತೆ ಮಾಡಿದ್ದೀಯಾ. ಮೊದಲ ತಮ್ಮನು ಸ್ವಲ್ಪ ತಿಳುವಳಿಕೆ ಇರುವವನಾದ್ದರಿಂದ ಆ ಹಳ್ಳಿಯಲ್ಲಿ ಇರುವುದಕ್ಕಿಂತ ಮಿಲಿಟರಿಯಲ್ಲಿ ಸೇರಿ ಸುಲಭವಾಗಿ ಇರಬಹು ದೆಂದು ಸಂತೋಷವಾಗಿ ಸೈನ್ಯದಲ್ಲಿ ಸೇರಿದ್ದಾನೆ. ಅಲ್ಲಿಗೆ 20 ಎಕರೆಗಳ ಹೊಲವನ್ನು ನೀನೆ ಅನುಭವಿಸುವುದಕ್ಕೆ ಯಾವ ಆತಂಕವು ಇಲ್ಲದಂತೆ ಹೋಗಿದೆ. ಈ ವಿಧವಾಗಿ ನಿನ್ನ ಕೆಟ್ಟ ಯೋಚನೆಗಳಿಂದ ನಾಲ್ಕುಜನ ತಮ್ಮಂದಿರ ಭೂಮಿಯನ್ನು ನೀನು ಒಬ್ಬನೆ ಆಕ್ರಮಿಸಿಕೊಳ್ಳುವುದು ನಡೆದಿದೆ. ಆದರೆ ಈ ಕಾರ್ಯಗಳ ಹಿಂದೆ ಅಡಗಿರುವ ಪಾಪ ಎಷ್ಟು ಎಂದು ಮಾತ್ರ ನಿನಗೆ ತಿಳಿದಿಲ್ಲ. ಇದೆಲ್ಲವೂ ಪ್ರಪಂಚ ಸಂಬಂಧವಾದ ಕಾರ್ಯಗಳೇ ಆಗಿರುವುದರಿಂದ ಪ್ರಪಂಚ ಸಂಬಂಧ ಪಾಪವೇ ಸಂಭವಿಸಿದೆ. ಈಗ ನಿನ್ನ ವಯಸ್ಸು 95 ವರ್ಷಗಳು. ನಿನ್ನ ತಮ್ಮಂದಿರ ಭೂಮಿಯನ್ನು ನೀನು ಸಂಪಾದಿಸಿ ನಾಲ್ಕರಿಂದ 20 ಎಕರೆಗಳನ್ನು ಸಂಪಾದಿಸಿಕೊಂಡಿರುವೆ.

ನೀನು ಹುಟ್ಟಿದಾಗ ನಿಮ್ಮ ಕುಟುಂಬಕ್ಕೆ ಒಟ್ಟಾರೆ 20 ಎಕರೆಗಳ ಭೂಮಿ ಇರುವಾಗ ಈಗ ನೀನೊಬ್ಬನೆ ಆ ಭೂಮಿ ಎಲ್ಲವನ್ನು ಆಕ್ರಮಿಸಿಕೊಂಡಿದ್ದೀಯಾ. ಇದು ನಿನ್ನ ಕುಟುಂಬದಲ್ಲಿ ನೀನು ಸಂಪಾದಿಸಿದ ಆಕ್ರಮ ಆಸ್ತಿ. ಹೊರಗೆ ವ್ಯವಹಾರದಲ್ಲಿ ಕೂಡಾ ಉಳಿದವರನ್ನು ಯಾವುದೋ ಒಂದು ವಿಧವಾಗಿ ಮೋಸಮಾಡಿ ಭೂಮಿಯನ್ನು ಸಂಪಾದಿಸಿರುವೆ. 150 ಎಕರೆಗಳ ಭೂಮಿ

ಇರುವ ಒಬ್ಬ ಯಜಮಾನ ಊರು ಬಿಟ್ಟು ವ್ಯಾಪಾರಕ್ಕೋಸ್ಕರ ದೊಡ್ಡ ನಗರಕ್ಕೆ ಹೋಗಿದ್ದಾನೆ. ಓದಿಕೊಂಡವನಾದ್ದರಿಂದ ವಿದೇಶಗಳಿಗೆ ಹೋಗಿ ವ್ಯಾಪಾರ ಮಾಡಿ ಬಹಳ ಸಂಪಾದಿಸಿಕೊಂಡು ಸ್ವಂತ ಊರಿಗೆ ಬರುವುದೇ ಇಲ್ಲ. ಆದುದರಿಂದ ತನ್ನ 150 ಎಕರೆಗಳ ಭೂಮಿಯನ್ನು ಗುತ್ತಿಗೆಗೆ ಕೊಟ್ಟಿದ್ದಾನೆ. ಊರಿನಲ್ಲಿ ಕಡಿಮೆ ಭೂಮಿ ಇರುವವನು ನೀನೆ ಆದ್ದರಿಂದ ನೀನು ಕೇಳಿದ ತಕ್ಷಣ ಭೂಮಿಯನ್ನು ಗುತ್ತಿಗೆಗೆ ಕೊಡುವುದು ನಡೆದಿದೆ. ಅತಿ ಕಡಿಮೆ ಗುತ್ತಿಗೆಗೆ ತೆಗೆದುಕೊಂಡ ನೀನು 150 ಎಕರೆಗಳಲ್ಲಿ ಬೆಳೆಸಿಕೊಳ್ಳುತ್ತಾ ಗುತ್ತಿಗೆ ಮಾತ್ರ ಸರಿಯಾಗಿ ಎಂದಿಗೂ ಆತನಿಗೆ ಕೊಡಲಿಲ್ಲ. ಬೆಳೆ ಬೆಳೆಯಲಿಲ್ಲವೆಂದು ಹೇಳುತ್ತಿದ್ದನು. ಭೂಮಿ ಯಜಮಾನನಿಗೆ ವ್ಯಾಪಾರದಲ್ಲಿ ಹೆಚ್ಚಾಗಿ ಲಾಭ ಬರುವುದರಿಂದ ಭೂಮಿ ವಿಷಯವನ್ನು ಆತನು ಕೂಡಾ ಶ್ರದ್ಧೆಯಿಂದ ಹಿಡಿಸಿಕೊಳ್ಳಲಿಲ್ಲ. ಭೂಮಿ ಬೀಡಾಗಿರದಂತೆ ಸಾಗುವಳಿ ಆದರೆ ಸಾಕು, ಗುತ್ತಿಗೆ ಬರದಿದ್ದರೂ ಪರವಾಗಿಲ್ಲ ಎಂದುಕೊಂಡನು. ಆತನ ಉದ್ದೇಶವನ್ನು ಗ್ರಹಿಸಿದ ನೀನು ಐದು ವರ್ಷಗಳಿಗೆ ಒಂದುಸಲ ಕೂಡಾ ಗುತ್ತಿಗೆ ಸರಿಯಾಗಿ ಕೊಡಲಿಲ್ಲ.

ಅಲ್ಲಿಗೆ ಸುಮ್ಮನಾಗದೆ ಪಕ್ಕದ ಹೊಲದವರೊಂದಿಗೆ ತಗಾದೆಗಳು ಇವೆಯೆಂದು ಆತನನ್ನು ನಂಬಿಸಿ ಭೂಮಿಯನ್ನು ಮಾರುವುದೆ ಒಳ್ಳೆಯದೆಂದು ಹೇಳಿದ್ದೀಯಾ. ನಿನ್ನ ಮಾತು ಕೇಳಿ ಆತನು ತನ್ನ ಭೂಮಿಯೆಲ್ಲವನ್ನು ಮಾರಬೇಕೆಂದುಕೊಂಡನು. ಆಗ ಭೂಮಿ ಬೆಲೆ ಆತನಿಗೆ ಕಡಿಮೆ ಹೇಳಿ ಒಪ್ಪಿಸಿ ಅದಕ್ಕೆ ನಾಲ್ಕರಷ್ಟು ನೀನು ಮಾರಿಕೊಂಡಿರುವೆ. ಹಾಗೆ 50 ಎಕರೆಗಳ ಭೂಮಿಯನ್ನು ಮಾರುವಂತೆಮಾಡಿ ಆ ಭೂಮಿಯನ್ನು ಮಾರಿದಾಗ ಉಳಿದ ಲಾಭದಿಂದ ಆತನ 100 ಎಕರೆಗಳನ್ನು ನೀನೆ ಕೊಂಡಿರುವೆ. ಹೀಗೆ ಆಕ್ರಮವಾಗಿ ನೂರು ಎಕರೆಗಳನ್ನು ಸಂಪಾದಿಸಿದ್ದೀಯಾ. ಎಷ್ಟೋ ವರ್ಷಗಳಿಂದ ಗುತ್ತಿಗೆ ವಿಷಯದಲ್ಲಿ ಮೋಸಮಾಡುವುದಲ್ಲದೆ ಭೂಮಿಯನ್ನು ಅನವಶ್ಯವಾಗಿ ಮಾರುವಂತೆ ಮಾಡಿ ಅದರಲ್ಲಿ ಲಾಭವಾಗಿ ನೂರು ಎಕರೆಗಳನ್ನು ದೋಚಿ ಕೊಂಡಿರುವೆ. ಈ ವಿಧವಾಗಿ ಹೊರಗಿನ ಪ್ರಪಂಚದಲ್ಲಿ ಮೋಸ ಮಾಡಿರುವೆ. ಅಷ್ಟೇ ಅಲ್ಲದೆ ಸ್ವಂತ ಸಂಬಂಧಿಕರನ್ನು ಕೂಡಾ ಮೋಸ ಮಾಡಿ ಹತ್ತು ಎಕರೆಗಳ

ಹೊಲವನ್ನು ಸಂಪಾದಿಸಿರುವೆ. ಹೆಂಡತಿ ಕಡೆಯ ನೆಂಟರಿಗು ಅಂದರೆ ಹೆಂಡತಿಯ ಅಕ್ಕನಿಗು ನಿಮ್ಮ ಊರಿನಲ್ಲಿಯೇ ಹತ್ತು ಎಕರೆಗಳ ಭೂಮಿಯನ್ನು ಕೊಳ್ಳುವಂತೆ ಮಾಡಿದ್ದೀಯಾ. ಅವರು ಕೊಂಡ ಭೂಮಿಯನ್ನು ಪಾಲುಗಾರಿಕೆಗಾಗಲಿ, ಗುತ್ತಿಗೆಗಾಗಲಿ ನೀನೇ ಮಾಡಿರುವೆ. ಅವರಿಗು ಕೂಡಾ ಪ್ರತಿ ವರ್ಷ ಬೆಳೆ ಬೆಳೆಯಲಿಲ್ಲವೆಂದು ಹೇಳಿದ್ದೀಯಾ. ಆ ಭೂಮಿಮೇಲೆ ಬ್ಯಾಂಕಿನಲ್ಲಿ ಲೋನು ತೆಗೆದುಕೊಳ್ಳುವಂತೆ ಮಾಡಿ ಬಂದಿರುವ ಹಣವನ್ನು ನೀನೇ ತೆಗೆದುಕೊಂಡು ಹೊಲದ ಬೊದಗಳು ಸರಿಮಾಡಬೇಕೆಂದು, ಭೂಮಿಯನ್ನು ಸಮತಟ್ಟು ಮಾಡಬೇಕೆಂದು ಹಣ ಅದಕ್ಕೆ ಸರಿಹೋಗುತ್ತದೆಂದು ಹೇಳಿದ್ದೀಯಾ. ಆ ಕೆಲಸಗಳು ಏನು ಮಾಡದೆ ಹಣವನ್ನು ನುಂಗಿರುವೆ. ಕೊನೆಗೆ ಅವರ ಹತ್ತಿರವೂ ಸಹ ಭೂಮಿಯನ್ನು ಮಾರುವಂತೆ ಮಾಡಿರುವೆ. ಯಾರೂ ಕೊಳ್ಳುವುದಿಲ್ಲವೆಂದು ಹೇಳಿ ಕಡಿಮೆ ಧರೆಗೆ ಕೊಂಡಿರುವುದರಲ್ಲಿ ಅರ್ಧ ಧರಕ್ಕೆ ನೀನು ತೆಗೆದುಕೊಂಡಿದ್ದೀಯಾ. ಆ ಹಣವನ್ನು ಕೊಡದಂತೆ ಅವರಿಗೆ ಪಂಗನಾಮ ಇಟ್ಟಿರುವೆ.

ಈ ವಿಧವಾಗಿ ನೀನು ನಿನ್ನ ಜೀವನವೆಲ್ಲ ಪಾಪ ಸಂಪಾದಿಸಿಕೊಳ್ಳುವುದೆ ಸರಿಹೋಗಿದೆ. ನಿನ್ನ ಜೀವನವೆಲ್ಲವೂ ಒಂದು ದೊಡ್ಡ ಪಾಪಗಳ ಹುತ್ತವಾಗಿದೆ. ಪ್ರಪಂಚ ವಿಷಯಗಳಲ್ಲಿಯೇ ಪಾಪಗಳನ್ನು ಸಂಪಾದಿಸಿಕೊಂಡ ನೀನು ದೈವಿಕವಾಗಿ ಯಾವ ಪಾಪ ಮಾಡಲಿಲ್ಲ. "ನಾಲ್ವರೊಂದಿಗೆ ನಾರಾಯಣ" ಎನ್ನುವಂತೆ ಎಲ್ಲರೂ ಮಾಡಿದ ಪೂಜೆಗಳು ಮಾಡಿ, ಎಲ್ಲರೂ ಗುಡಿಗಳಿಗೆ ಹೋದಂತೆ ಹೋಗುತ್ತಿದ್ದೆ. ದೇವರೆಂದರೆ ಭಯ ಇರುವುದರಿಂದ ದೇವರ ಒಡವೆಯನ್ನು ಮಾತ್ರ ಬಿಟ್ಟಿದ್ದೀಯಾ. ಮನುಷ್ಯರಲ್ಲಿ ತನ್ನವನು ಪರಾಯಿಯವನು ಎಂಬ ಭೇದವು ಇಲ್ಲದಂತೆ ಮೋಸ ಮಾಡಿರುವೆ. ನೀನು ಮಾಡಿದ ಪ್ರತಿ ಕೆಲಸಕ್ಕೆ ಲೆಕ್ಕ ಪ್ರಕಾರ ಕರ್ಮವನ್ನು ಲೆಕ್ಕಿಸಿ ಬರೆದಿಟ್ಟಿರುವವನು ನಿನ್ನ ಶರೀರದಲ್ಲಿಯೇ ಇದ್ದಾನೆ. ನೀನು ಮಾಡಿದ ಮೋಸಗಳು ಯಾರಿಗೂ ತಿಳಿಯವೆಂದು ತಿಳಿದುಕೊಂಡಿದ್ದೀಯಾ. ನಿನಗೆ ತಿಳಿಯದಂತೆ ನಿನ್ನಲ್ಲಿಯೇ ಇದ್ದು ನೀನು ಮಾಡಿದ ಪ್ರತಿ ಕೆಲಸವನ್ನು ಲೆಕ್ಕಿಸುವವನಿದ್ದಾನೆಂದು ನಿನಗೆ ತಿಳಿದಿಲ್ಲ. ಈಗ

ನೀನು ಸಾವಿಗೆ ಹತ್ತಿರವಾಗಿದ್ದೀಯಾ. ಈಗಲಾದರೂ 95 ವರ್ಷಗಳು ಕಳೆದುಹೋಗಿವೆ. ಇನ್ನು ನೀನು ಬದುಕಿದರೆ ಒಂದು ವರ್ಷ ಅಥವಾ ಅದಕ್ಕಿಂತ ಕಡಿಮೆ ಕೆಲವು ತಿಂಗಳು ಮಾತ್ರವೆ!

ನಿನ್ನ ಜೀವನದ ಕೊನೆಯ ಹಂತದಲ್ಲಿ ನಾನು ನಿನಗೆ ಉತ್ತರ ಬರೆಯುವುದು ನಡೆದಿದೆ. ನನ್ನ ಉತ್ತರದಿಂದ ನೀನು ಮಾಡಿರುವುದೆಲ್ಲಾ ಪಾಪವೇಯೆಂದು ನಿನಗೆ ಗುರುತು ಮಾಡುವುದಾಗಿದೆ. ದೇವರು ತನ್ನ ಪ್ರಥಮ ಗ್ರಂಥವಾದ ಭಗವದ್ಗೀತೆಯಲ್ಲಿ ಜ್ಞಾನಯೋಗ 36, 37 ಶ್ಲೋಕಗಳಲ್ಲಿ ಹೇಳಿದಂತೆ ನಿನ್ನ ಪಾಪವನ್ನು ಕ್ಷಮಿಸಬಲ್ಲನು. ನೀನು ಮಾಡಿರುವುದು ಘೋರವಾದ ಪಾಪವೇ ಮನುಷ್ಯರಾದರೆ ನಿನ್ನ ಮೇಲೆ ಸೇಡು ತೀರಿಸಿಕೊಳ್ಳಬೇಕೆಂದುಕೊಳ್ಳುತ್ತಾರೆ. ಭಗವದ್ಗೀತೆಯನ್ನು ಹೇಳಿದವನು ಮನುಷ್ಯನಲ್ಲ, ದೇವರೇ ಆ ವಿಷಯವನ್ನು ಪ್ರಕಟಿಸುವುದರಿಂದ ಮನುಷ್ಯರಂತೆ ಸೇಡು ತೀರಿಸಿಕೊಳ್ಳುವ ಭಾವನೆ ಇಲ್ಲದಂತೆ ನೀನು ಮಾಡಿದ ಪ್ರತಿ ಪಾಪವನ್ನು ಜ್ಞಾನದಿಂದ ಇಲ್ಲದಂತೆ ಮಾಡಿಕೊಳ್ಳುವ ವಿಧಾನವನ್ನು ನಿನಗೆ ಹೇಳಿದ್ದಾನೆ. ನೀನು ದೇವರು ಹೇಳಿರುವುದನ್ನು ತಿಳಿಯಲ್ಪಟ್ಟು ದೇವರ ಜ್ಞಾನವನ್ನು ಗ್ರಹಿಸಲ್ಪಟ್ಟರೆ, ದೇವರ ಜ್ಞಾನದ ಪ್ರಕಾರ ನಡೆದರೆ ನಿನ್ನದು ಎಷ್ಟು ದೊಡ್ಡ ಪಾಪವಾದರೂ ತನ್ನ ಜ್ಞಾನಾಗ್ನಿಯಲ್ಲಿ ಸುಟ್ಟುಹೋಗುತ್ತದೆಂದು ತಿಳಿಸಿದ್ದಾನೆ. ನೀನು ನಿನ್ನ ಜೀವನದಲ್ಲಿ ದೇವರಿಗೆ ವಿರುದ್ಧವಾದ ಕೆಲಸವನ್ನು ಒಂದನ್ನು ಸಹ ಮಾಡಲಿಲ್ಲ. ಸಮಯ ದೊರೆತಿದ್ದರೆ ಮಾಡುತ್ತಿದ್ದೆಯೋ ಇಲ್ಲವೋ ಆದರೆ, ನಿನಗೆ ಇತರ ಮನುಷ್ಯರನ್ನು ಮೋಸ ಮಾಡುವುದಕ್ಕೆ ಕಾಲವೆಲ್ಲಾ ಸರಿಹೋಗಿದೆ. ದೇವರೆಂದರೆ ಭಯ ಇರುವುದರಿಂದ ನಿನಗೆ ನಾವು ಹಿತ ಹೇಳುತ್ತಿದ್ದೇವೆ. ನಮ್ಮ ಹಿತದಿಂದ ನೀನು ಚೆನ್ನಾಗಿರುತ್ತೀಯಾ ಎಂದು ತಿಳಿದುಕೊಳ್ಳುತ್ತಿದ್ದೇನೆ. ಪೂರ್ವದಲ್ಲಿ ಹರ್ಷಕನಾಗಿರುವ ರೈತನು ಈದಿನ ವಿಷಯಗಳಲ್ಲಿ ಮುಳುಗಿಹೋಗಿ ಕರ್ಷಕನಾಗಿ ಬದಲಾಗುವುದಲ್ಲದೆ ಪೂರ್ತಿ ಕರ್ಷಕನಾಗಿ ಬದಲಾಗಿದ್ದಾನೆ. ಹರ್ಷಕನು ಕರ್ಕಷನಾಗಿ ಬದಲಾಗುವುದರಿಂದ ರೈತನ ಜೀವನದಲ್ಲಿ ಯಾವಮಾತ್ರ ಸುಖ ಇಲ್ಲದಂತೆ ಹೋಗಿದೆ. ಆದುದರಿಂದ ಈದಿನ ದೇಶದಲ್ಲಿನ ಹರ್ಷಕರೆಲ್ಲರನ್ನು ಕರ್ಷಕರನ್ನಾಗಿ ಕರೆಯುತ್ತಿದ್ದೇವೆ. ಕರ್ಷಕರು

ರೈತರಾಗಿಯೇ ಇರಬೇಕೆಂದು ಕರ್ಷಕರಾಗಿ ಬದಲಾಗಬಾರದೆಂದು ಹೇಳುತ್ತಿದ್ದೇವೆ. ಪೂರ್ವದಂತೆ ರೈತರಲ್ಲಿ ಸಂತೋಷ ಇರಬೇಕೆಂದರೆ ರೈತರು ಪಾಪಗಳಿಗೆ ದೂರವಾಗಿ ಇರಬೇಕು. ಆಗ ಪ್ರತಿ ಕರ್ಷಕನು **'ಹರ್ಷಕನಾ'**ಗಿ ಬದಲಾಗಿಹೋಗುತ್ತಾನೆ. ಈಗಲಿಂದಾದರೂ ನೀನು ಪಾಪಚಿಂತೆಯನ್ನು ಬಿಟ್ಟು ಜೀವನದ ಕೊನೆಯಲ್ಲಿ ದೇವರ ಮೇಲೆ ಧ್ಯಾಸವನ್ನು ಇಟ್ಟುಕೊ, ಇದಕ್ಕಿಂತ ನಿನಗೆ ಹೆಚ್ಚಾಗಿ ಹೇಳಲಾರೆವು.

ಇಂತಿ

***ಆಚಾರ್ಯ ಪ್ರಬೋಧಾನಂದ ಯೋಗೀಶ್ವರರು***

# ಐದನೇ ಲೇಖ

***ಪೋಲೀಸ್ ಆಫೀಸರ್‌ಗೆ...***

ಜೀವಾತ್ಮ ಸ್ವರೂಪರಾದ ನರಸಿಂಹ ಚೌದರಿಯವರಿಗೆ ಬರೆಯುವ ಉತ್ತರ ಏನೆಂದರೆ!

ನಿನಗೆ ಈಗ ಮೂವತ್ತು ವರ್ಷಗಳ ವಯಸ್ಸು ಬಂದಿದೆ. ನಿನಗೆ ದುರದೃಷ್ಟವಶಾತ್ತು ಪೋಲೀಸ್ ಉದ್ಯೋಗ ಬಂದಿದೆ. ಪೋಲೀಸ್ ಇನ್‌ಸ್ಪೆಕ್ಟರ್ ಉದ್ಯೋಗ ಅದೃಷ್ಟದಿಂದ ಬಂದಿದೆಯೆಂದು ನೀನು ತಿಳಿದುಕೊಂಡಿದ್ದೀಯಾ. ನಾನು ದುರದೃಷ್ಟದಿಂದ ಬಂದಿದೆಯೆಂದು ಹೇಳುತ್ತಿದ್ದೇನೆ. ಎರಡು ವರ್ಷಗಳ ಕೆಳಗೆ ಒಬ್ಬನು ನನ್ನ ಹತ್ತಿರಕ್ಕೆ ಬಂದು "ನನಗೆ ಪೋಲೀಸ್ ಉದ್ಯೋಗ ಬಂದಿದೆ" ಎಂದು ಹೇಳಿದ್ದಾನೆ. ಆಗ ನಾನು "ನೀನು ಬದುಕುವುದಕ್ಕೆ ಅಲ್ಲವೆ! ಪೋಲೀಸ್ ಉದ್ಯೋಗ ಮಾಡಬೇಕೆಂದುಕೊಳ್ಳುತ್ತೀಯಾ. ಅದನ್ನು ಮಾಡುವುದಕ್ಕಿಂತ ಬೀಡಿ ಅಂಗಡಿ ಇಟ್ಟುಕೊ ಆದಾಯ ಕಡಿಮೆಯಾದರೂ ಬದುಕುತ್ತಿಯಾ" ಎಂದು ಹೇಳಿದ್ದೇನೆ. ಹಾಗೆ ಹೇಳುವುದಕ್ಕೆ ಕಾರಣ ಇದೆ. ಪೋಲೀಸ್ ಉದ್ಯೋಗ ಮಾಡಿದರೆ ಹಣ ಹೆಚ್ಚಾಗಿ ಬರುತ್ತದೆ, ಸುಖವಾಗಿ ಬದುಕಬಹುದು. ಆದರೆ

ಬೀಡಿಗಳ ಅಂಗಡಿಯಿಂದ ಹಣ ಕಡಿಮೆ ಬರುತ್ತದೆ ಆದರೂ ಸ್ವಲ್ಪಮಟ್ಟಿನ ಸವರಣಗಳಿಂದ ಬದುಕಬಹುದು. ಪೋಲೀಸ್ ಉದ್ಯೋಗದಲ್ಲಿ ಹಣ ಬಂದರೂ ಹಣಕ್ಕಿಂತ ನಾಲ್ಕರಷ್ಟು ಪಾಪ ಬರುತ್ತದೆ. ಆ ಪಾಪ ನಂತರ ಜನ್ಮಗಳಲ್ಲಿ ದುರ್ಭರ ಜೀವನವನ್ನು ಕಳೆಯುವಂತೆ ಮಾಡುತ್ತದೆ. ಒಂದು ಜನ್ಮದಲ್ಲಿ ಹಣ ಬರುವ ಪೋಲೀಸ್ ಉದ್ಯೋಗ ಮಾಡಿ, ಈ ಒಂದು ಜನ್ಮದಲ್ಲಿ ಬಂದಿರುವ ಪಾಪವನ್ನು ನಾಲ್ಕು ಜನ್ಮಗಳ ಜೀವನದಲ್ಲಿ ಅನುಭವಿಸಬೇಕಾಗಿರುತ್ತದೆ. ಅದೇ ಬೀಡಿಗಳ ಅಂಗಡಿಯಿಂದ ದೊಡ್ಡ ಪಾಪವೇನು ಬರುವುದಿಲ್ಲ. ಅದರಲ್ಲಿ ದಿನವೆಲ್ಲಾ ಕೆಲಸ ಮಾಡಿದರೂ ಪಾಪ ಬರುವ ಅವಕಾಶವೇ ಇರುವುದಿಲ್ಲ. ಪೋಲೀಸ್ ಉದ್ಯೋಗದಲ್ಲಿ  ಒಂದು ದಿನ ಕೆಲಸ ಮಾಡಿದರೂ ನಾಲ್ಕು ದಿನಗಳು ಅನುಭವಿಸುವ  ಪಾಪ ಬರುವುದಕ್ಕೆ ಅವಕಾಶ ಇದೆ. ಆದುದರಿಂದ ನೀನು ಪೋಲೀಸ್ ಆಫೀಸರಾಗಿ ಪೋಲೀಸ್ ಇನ್‌ಸ್ಪೆಕ್ಟರಾಗಿ ಕೆಲಸ ಮಾಡುವುದು ನಿನ್ನ ದುರಾದೃಷ್ಟವು ಎಂದು ಹೇಳಿದ್ದೇನೆ. ಚೆನ್ನಾಗಿ ಆಲೋಚಿಸಿ ನೋಡಿದರೆ ನನ್ನ ಮಾತು ನಿಜವೆಂದು ನಿನಗೆ ತಿಳಿಯುತ್ತದೆ.

ಉದ್ಯೋಗಗಳು ಅನೇಕ ವಿಧಗಳಾಗಿ ಇವೆ. ಒಬ್ಬ ಮುನಿಸಿಪಾಲಿಟಿಯಲ್ಲಿ ಉದ್ಯೋಗ ಮಾಡುತ್ತಿರುವಾಗ, ಇನ್ನೊಬ್ಬನು ಬಸ್‌ಡಿಪೋದಲ್ಲಿ ಬಸ್‌ಡ್ರೈವರ್ ಉದ್ಯೋಗ ಮಾಡುತ್ತಿರುತ್ತಾನೆ. ಹೀಗೆ ಎಷ್ಟೋ ರಂಗಗಳಲ್ಲಿನ ಕೆಲಸಗಳನ್ನು ಉದ್ಯೋಗ ಎಂದು ಕರೆಯುತ್ತಿದ್ದೇವೆ. ಕೆಲಸ ಮಾಡುವ ಡಿಪಾರ್ಟ್‌ಮೆಂಟ್ಸ್ ಹೆಸರಾದರೂ, ಮಾಡುವ ಕೆಲಸಗಳು ಚಿಕ್ಕವಾದರೂ, ದೊಡ್ಡವಾದರೂ ಮಾಡುವ ಕೆಲಸವನ್ನು ಉದ್ಯೋಗ ಎಂದೂ ಮಾಡುವವನನ್ನು 'ಉದ್ಯೋಗಿ' ಎಂದೂ ಹೇಳುತ್ತಾರೆ. "ಉದ್ಯೋಗ" ಎನ್ನುವ ಪದ ಪೂರ್ವದಲ್ಲಿ ಕೃತಯುಗದಲ್ಲಿಯೇ ಇತ್ತು. ಅಂದಿನಿಂದ  ಉದ್ಯೋಗ ಎನ್ನುವ ಪದ ಬದಲಾಗದಂತೆ ಈಲ್ಲಿಯವರೆಗೂ ಹಾಗೆ ನಿಂತಿದೆ, 'ಉದ್ಯೋಗ' ಎನ್ನುವ ಪದದಿಂದ 'ಉದ್ಯೋಗಿ' ಎನ್ನುವ ಪದ ಬಂದಿದೆ. ಉದ್ಯೋಗ ಮಾಡುವವನು ಉದ್ಯೋಗಿ ಎಂದು ಹೇಳಬಹುದು. ಉದ್ಯೋಗ ಮಾಡುವವನು ಉದ್ಯೋಗಿ ಅದಾಗ ಯಾವ ಕೆಲಸವನ್ನು

ಮಾಡದವನನ್ನು "ನಿರುದ್ಯೋಗಿ" ಎಂದು ಕರೆಯುತ್ತಿದ್ದರು. 'ಉದ್ಯೋಗಿ' ಎನ್ನುವ ಹೆಸರು ಪೂರ್ವದಲ್ಲಿ ಹೇಗೆ ಬಂದಿದೆ ಎಂದರೆ ಅದಕ್ಕೆ ಒಂದು ಕಾರಣ ಇದೆ. ಕೃತಯುಗದಲ್ಲಿ ಈಗಿರುವಂತೆ ಮೋಟಾರ್ ಡಿಪಾರ್ಟ್‌ಮೆಂಟಾಗಲಿ, ರೈಲ್ವೇ ಡಿಪಾರ್ಟ್‌ಮೆಂಟಾಗಲಿ, ವಿದ್ಯುತ್ತು ಡಿಪಾರ್ಟ್‌ಮೆಂಟಾಗಲಿ, ವಿದ್ಯಾ ಡಿಪಾರ್ಟ್ ಮೆಂಟಾಗಲಿ ಮೊದಲು ಇವ್ಯಾವ ಡಿಪಾರ್ಟ್‌ಮೆಂಟ್‌ಗಳು ಇಲ್ಲ. ಆಗಿನಕಾಲದಲ್ಲಿ ರಾಜನ ಕೆಳಗೆ ಮಂತ್ರಿಯಾಗಲಿ, ಸೈನ್ಯಾಧಿಪತಿಯಾಗಲಿ, ಸೈನಿಕರಾಗಲಿ ಕೆಲಸಮಾಡುವುದೆ ಇತ್ತು. ರಾಜನಿದ್ದರೂ ರಾಜನಕೆಳಗೆ ಮಂತ್ರಿ ಒಬ್ಬನೇ ಇರುತ್ತಿದ್ದನು. ಇಂದಿನಂತೆ ಅನೇಕ ಮಂತ್ರಿಗಳು ಇರುತ್ತಿರಲಿಲ್ಲ. ಮಂತ್ರಿ ನಂತರ ಸೈನ್ಯಾಧ್ಯಕ್ಷನು ಒಬ್ಬನೇ ಇರುತ್ತಿದ್ದನು ಆತನನ್ನು ಸೇನಾಧಿಪತಿ ಎಂದು ಹೇಳುತ್ತಿದ್ದರು. ರಾಜ, ಮಂತ್ರಿ, ಸೇನಾಧಿಪತಿ ನಂತರ ಸೈನಿಕರು ಸಾವಿರಗಟ್ಟಲೇ ಇರುತ್ತಿದ್ದರು. ಚಕ್ರವರ್ತಿ ಹತ್ತಿರವಾದರೆ ಸೈನಿಕರು ಲಕ್ಷಸಂಖ್ಯೆಯಲ್ಲಿ ಇರುತ್ತಿದ್ದರು. ಪೂರ್ವದಲ್ಲಿ ಈ ವಿಧವಾಗಿ ನಾಲ್ಕು ವಿಧಗಳ ಉದ್ಯೋಗಗಳು ಮಾತ್ರವೆ ಇದ್ದವು.

ಚಕ್ರವರ್ತಿ ಕೆಳಗೆ ರಾಜನು ಸಹ ಒಬ್ಬ ಉದ್ಯೋಗಿಯಾಗಿ ಕೆಲಸ ಮಾಡುತ್ತಿದ್ದನು. ನಾಲ್ಕು ವಿಧಗಳ ಉದ್ಯೋಗಗಳು ಹೊರತು ಯಾವ ಉದ್ಯೋಗ ಇರುತ್ತಿರಲಿಲ್ಲ. ಉದ್ಯೋಗ ಎನ್ನುವವಮಾತನ್ನು ಬಿಡಿಸಿ ನೋಡಿದರೆ ಉದ್+ಯೋಗ=ಉದ್ಯೋಗ. "ಉದ್" ಎಂದರೆ ಮೇಲೆ ಎಂದೂ, ಉನ್ನತವೆಂದೂ ದೊಡ್ಡದು ಎಂದೂ ಹೇಳಬಹುದು. ಶ್ರೇಷ್ಠ, ದೊಡ್ಡದು, ಮೇಲೆ ಎಂದು **"ದೈವ"ವನ್ನು** ಹೇಳುತ್ತಿದ್ದರು. **"ಯೋಗ"** ಎಂದರೆ ಕೂಡಿಕೆ ಎಂದೂ, ಸೇರಿಹೋಗುವುದು ಎಂದೂ ಹೇಳಬಹುದು. **ದೇವರಲ್ಲಿ ಸೇರಿಹೋಗುವುದಾಗಲಿ, ದೇವರಲ್ಲಿ ಬೆರೆತು ಹೋಗುವುದಾಗಲಿ ಉದ್ಯೋಗ ಎಂದು ಹೇಳಬಹುದು.** ಉದ್ಯೋಗ ಒಂದರ ಮೂಲ ಅರ್ಥ ದೇವರೊಳಗೆ ಐಕ್ಯವಾಗುವುದು ಎಂದೂ, ಅಥವಾ ಮೋಕ್ಷ ಪಡೆಯುವುದೆಂದೂ ಹೇಳಬಹುದು. ಪೂರ್ವದಲ್ಲಿ ರಾಜನಾಗಿ, ಮಂತ್ರಿಯಾಗಿ, ಸೈನ್ಯಾಧಿಪತಿಯಾಗಿ, ಸೈನಿಕನಾಗಿ ಮಾಡುವ ನಾಲ್ಕು ವಿಧಗಳ ಕೆಲಸಗಳನ್ನು ಅವರು ಉದ್ಯೋಗಳಾಗಿ ಭಾವಿಸಿ ಮಾಡುತ್ತಿದ್ದರು. ಅವರು

ಮಾಡುವ ಕೆಲಸದಲ್ಲಿ ಸಚ್ಚರಿತ, ಸತ್‌ಪ್ರವರ್ತನೆ ಇರುತ್ತಿತ್ತು. ಅವರು ಮಾಡುವ ಕೆಲಸದಲ್ಲಿ ದುಷ್‌ಪ್ರವರ್ತನೆ ಯಾವುದು ಇರುತ್ತಿರಲಿಲ್ಲ. ಅವರು ಮಾಡುವ ಕೆಲಸಗಳಲ್ಲಿ ಜ್ಞಾನದಿಂದ ಕೂಡಿಕೊಂಡ ಪ್ರವರ್ತನೆ ಇರುತ್ತಿತ್ತು. ಅವರು ಮಾಡುವ ಕೆಲಸ ಯಾವುದಾದರೂ ದೇವರಿಗೆ ಸನ್ನಿತವಾಗಿ, ಹತ್ತಿರಕ್ಕೆ ತೆಗೆದುಕೊಂಡು ಹೋಗುವುದಾಗಿ ಇರುತ್ತಿತ್ತು. ಹಾಗೆ ಇರುವುದರಿಂದಲೇ ಅವರು ಮಾಡುವ ಕೆಲಸವನ್ನು "ಉದ್ಯೋಗ" ಎಂದು ಕರೆದಿದ್ದಾರೆ. ಆ ಮಾತಿಗೆ ತಕ್ಕಂತೆ ಅವರ ಕೆಲಸಗಳು ಇತರರನ್ನು ಬಾಧಿಸದೆ ಎಷ್ಟೋ ಸೌಮ್ಯವಾಗಿದ್ದೂ ದೇವರ ಹತ್ತಿರಕ್ಕೆ ಸೇರಿಸುವಂತೆ ಇರುತ್ತಿದ್ದವು ಅದೇ 'ಉದ್ಯೋಗ.'

ಆ ದಿನಗಳಲ್ಲಿ ಉದ್ಯೋಗ ಎಂದರೆ ಎಷ್ಟೋ **'ಪವಿತ್ರತೆ'**ಯಿಂದ ಮಾಡುವುದೆಂದು ತಿಳಿಯುತ್ತಿದ್ದರು. ಈದಿನ ಎಷ್ಟೋ ಡಿಪಾರ್ಟ್‌ಮೆಂಟ್‌ಗಳು ಬೆಳೆದುಹೋಗಿವೆ. ಅನೇಕ ವಿಧಗಳ ಕೆಲಸಗಳಿಂದ ಕೂಡಿಕೊಂಡ ಉದ್ಯೋಗಗಳು ಬಂದಿವೆ. ಆದರೆ ಯಾವ ಉದ್ಯೋಗದಲ್ಲಿಯೂ ಪವಿತ್ರತೆ ಇಲ್ಲ. ಅವರು ಮಾಡುವವು ಕೆಲಸಗಳೆ ಹೊರತು, ಉದ್ಯೋಗಗಳು ಅಲ್ಲವೆಂದು ಹೇಳಬಹುದು. ಕರ್ಮಕ್ಕೆ ಅತೀತವಾಗಿ ಇರುವುದು, ಕರ್ಮವನ್ನು ಅಂಟದಿರುವುದು ಉದ್ಯೋಗ. ಆದರೆ ಈದಿನ ಮನುಷ್ಯರು ಮಾಡುವ ಕೆಲಸಗಳೆಲ್ಲ ಪಾಪವನ್ನು ಸಂಪಾದಿಸಿಡುವವು, ಪಾಪದಿಂದ ಕೂಡಿಕೊಂಡವವಾಗಿ ಇವೆ. ಆದುದರಿಂದ ಆ ಕೆಲಸಗಳನ್ನು 'ಉದ್ಯೋಗ' ಎಂದು ಅನ್ನಬಾರದು. ಅವರು ಉದ್ಯೋಗ ಮಾಡುವ ಉದ್ಯೋಗಿಗಳು ಅಲ್ಲ. **"ಯೋಗಿ"** ಎನ್ನುತ್ತಲೇ ಉನ್ನತವಾದವನು ಎನ್ನುವ ಭಾವವಿದೆ. 'ಉದ್ಯೋಗಿ' ಎಂದರೆ ಎಷ್ಟೋ ಉತ್ತಮನು, ಉನ್ನತವಾದ ಭಾವನೆ ಇರುವವನೆಂದು. ಉನ್ನತ ಯೋಗವನ್ನು ಅಚರಿಸುವವನೆಂದು ಹೇಳಬಹುದು. ಈದಿನ ನೀನು ಪೊಲೀಸ್ ವ್ಯವಸ್ಥೆಯಲ್ಲಿ ಇನ್‌ಸ್ಪೆಕ್ಟರಾಗಿ ಕೆಲಸಮಾಡುತ್ತೀದ್ದೀಯಾ ಅಲ್ಲವೆ! ನಿನ್ನ ಕೆಲಸ ಏನಾದರೂ ಉನ್ನತವಾದ ಯೋಗವಾಗಿ ಇದೆಯಾ? ನೀನು ಉದ್ ಯೋಗಿಯಾಗಿ ಇದ್ದೀಯಾ? ನೀನು ಮಾಡುವ ಕೆಲಸ ಯೋಗವೊಂದರ ಹತ್ತಿರದಲ್ಲಿ ಕೂಡಾ ಇಲ್ಲವೆಂದು ಹೇಳಬಹುದು.

ನೀನು ಜೀವನೋಪಾಯಕ್ಕಾಗಿ ಪೊಲೀಸ್ ವ್ಯವಸ್ಥೆಯಲ್ಲಿ ಸೇರಿರುವೆ. ಸೇರಿದ ನಂತರ "ನಾನು ಒಬ್ಬ ಮನುಷ್ಯನು" ಎಂದು ಮರೆತುಹೋಗಿದ್ದೀಯಾ. ನಾನು ಪೊಲೀಸ್ ಇನ್‌ಸ್ಪೆಕ್ಟರ್‌ನೆಂದು ತಿಳಿದುಕೊಂಡಿದ್ದೀಯಾ. ಅಂದಿನಿಂದ ಮನುಷ್ಯರೆಲ್ಲರು ನಿನ್ನ ಕಣ್ಣಿಗೆ ಮತ್ತೊಂದು ವಿಧವಾಗಿ ಕಾಣಿಸಿದ್ದಾರೆ. ನಿನ್ನ ಕೆಳಗೆ ಕೆಲವರು ಪೊಲೀಸರು ಕೆಲಸಮಾಡುವುದರಿಂದ ಮನುಷ್ಯರಿಗಿಂತ ಪೊಲೀಸ್ ದೊಡ್ಡವನು. ಪೊಲೀಸ್‌ಗಿಂತ ನಾನು ದೊಡ್ಡವನು ಎನ್ನುವ ನಿನ್ನ ಭಾವನೆ ನಿನ್ನನ್ನು ಮನುಷ್ಯನನ್ನಾಗಿ ಮರೆತುಹೋಗುವಂತೆ ಮಾಡಿದೆ. ಮನುಷ್ಯರೆ ಪಶುಗಳಾಗಿ ಕಾಣಿಸುವಾಗ ದೇವರು ನಿನಗೆ ಲೆಕ್ಕವಿಲ್ಲ, ದೇವರ ಮೇಲೆ ಭಕ್ತಿಯಾಗಲಿ, ಭಯವಾಗಲಿ ನಿನಗೆ ಸ್ವಲ್ಪವೂ ಇಲ್ಲ. ದೇವರೆಂದು ಹೇಳುವ ವರೆಲ್ಲರೂ ಮೋಸಗಾರರಂತೆ, ದೈವಭಕ್ತರೆಲ್ಲರೂ ತಿಳುವಳಿಕೆ ಇಲ್ಲದವರಾಗಿ ನಿನಗೆ ಕಾಣಿಸುತ್ತಿದ್ದರು. ಸಾಧಾರಣ ಮನುಷ್ಯರನ್ನೇ ಸ್ವಲ್ಪವೂ ಲೆಕ್ಕಮಾಡದೆ, ಸಾಟಿಮನುಷ್ಯನಾಗಿ ನೋಡದಂತೆ ಕಡಿಮೆಮಾಡಿ ನೀಚವಾಗಿ ಮಾತನಾಡುವ ನೀನು ಭಕ್ತಿ ಜ್ಞಾನ ಎನ್ನುವವರನ್ನು ಇನ್ನೂ ಹೀನವಾಗಿ ನೋಡುವ ಸ್ವಭಾವ ನಿನಗಿದೆ. ನಿನ್ನ ತಲೆಯಲ್ಲಿನ ಆರು ಕೆಟ್ಟ ಗುಣಗಳಲ್ಲಿ ಮೊದಲನೆಯದಾದ 'ಆಸೆ', ಕೊನೆಯದಾದ 'ಅಸೂಯೆ' ಹೆಚ್ಚಾಗಿ ಇರುವವು. ಅವುಗಳೊಂದಿಗೆ ಸಮಾನವಾಗಿ 'ಗರ್ವ' ಸಹ ಇರುವುದರಿಂದ ನೀನು ಮಾಡುವವು ಪಾಪವನ್ನು ತರುವ ಕೆಲಸಗಳೆ ಆಗಿವೆ. ನೀನು ಎಷ್ಟು ಒಳ್ಳೆಯವನೊ ಎಷ್ಟು ಕೆಟ್ಟವನೊ ನಿನಗೆ ತಿಳಿಯುವಂತೆ ನಿನ್ನ ಜೀವನದಲ್ಲಿ ನಡೆದ ಕೆಲವು ಸಂಘಟಣೆಗಳನ್ನು ನೀನು ನೋಡಿಕೊ ತಿಳಿಯುತ್ತದೆ. ನೀನು ಕುಲದಲ್ಲಿ ಸಹ ಗರ್ವವನ್ನು ಪ್ರದರ್ಶಿಸುವುದರಿಂದ ನಿನ್ನ ಕುಲಸ್ಥರನ್ನು ಕೂಡಾ ಹೀನವಾಗಿ ಮಾತನಾಡುವವನು. ಎಷ್ಟೋಜನ ನಿನ್ನ ಕುಲಸ್ಥರು ಕೂಡಾ ನಿನ್ನನ್ನು ಅಸಹಿಸಿಕೊಂಡಿದ್ದಾರೆ, ಆದರೂ ನಿನ್ನ ಬುದ್ಧಿ ಸ್ವಲ್ಪವೂ ಸಹ ಬದಲಾಗಲಿಲ್ಲ. ನಿನ್ನಷ್ಟಕ್ಕೆ ನೀನು ಒಳ್ಳೆಯವನಾಗಿ, ನಿನ್ನಷ್ಟಕ್ಕೆ ನೀನು ಉತ್ತಮನು ಎಂದುಕೊಂಡಷ್ಟು ಮಾತ್ರಕ್ಕೆ ನಿನ್ನಷ್ಟಕ್ಕೆ ನೀನು ಒಳ್ಳೆಯವನು ಆಗುವುದಿಲ್ಲ. ಉತ್ತಮನು ಆಗುವುದಿಲ್ಲ. ನಿನ್ನ ಅಧಿಕಾರ ನಿನ್ನನ್ನು

ಕಣ್ಣು ಮುಚ್ಚುಕೊಂಡುಹೋಗುವಂತೆ ಮಾಡಿದೆ. ನೀನು ಮಾಡುವ ಕೆಲಸ ಚಿಕ್ಕದೇಯೆಂದು ನಿನಗಿಂತ ದೊಡ್ಡ ಅಧಿಕಾರಿಗಳು ಕೂಡಾ ಎಷ್ಟೋ ಸೌಮ್ಯವಾಗಿ ಇದ್ದಾರೆಂದು ಮರೆತುಹೋಗಿದ್ದೀಯಾ.

"ನನಗೆ ಲೇಖ ಬರೆಯುವುದಕ್ಕೆ ನೀನು ಯಾರು?" ಎಂದು ನನ್ನನ್ನು ನೀವು ಪ್ರಶ್ನಿಸಬಹುದು. ನಿನ್ನಂತವರು ಹೀಗೆ ಕೇಳುತ್ತಾರೆಂದು ನನಗೆ ತಿಳಿದಿದೆ. ನಾನು ಸ್ವತಃವಾಗಿ ಈ ಲೇಖವನ್ನು ಬರೆಯಲಿಲ್ಲ. ನಿನ್ನನ್ನು ಹುಟ್ಟಿಸಿದ ದೇವರೆ ನನ್ನನ್ನು ಪ್ರೇರೆಪಿಸಿ ಈ ಲೇಖವನ್ನು ಬರೆಸುತ್ತಿದ್ದಾನೆ. ನಿನ್ನನ್ನು ಹುಟ್ಟಿಸಿದವನು ನಿನ್ನನ್ನು ದಂಡಿಸುತ್ತಾನೆ. ಅದಕ್ಕೆ ನಿನ್ನ ತಪ್ಪುಗಳನ್ನೆಲ್ಲ ಹೊರಗಿಡುತ್ತಾ ಬರೆಯುತ್ತಿದ್ದಾನೆ. ಈಗಲಾದರೂ ಕಣ್ತೆರೆದು ನೋಡಿದರೆ ಫರವಾಗಿಲ್ಲ ಇಲ್ಲದಿದ್ದರೆ ನಿನ್ನನ್ನು ರಕ್ಷಿಸುವವನು ವಿಶ್ವದಲ್ಲಿ ಯಾರೂ ಇಲ್ಲ. ನಿಮ್ಮ ಕುಟುಂಬದಲ್ಲಿ ನಿಮ್ಮ ತಾಯಿ,ತಂದೆ, ನೀನು, ನಿನ್ನ ತಮ್ಮನು ನಾಲ್ಕು ಜನರು ಮಾತ್ರವೇ ಇರುವವರು. ಮೊದಲು ನಿನ್ನ ತಂದೆ ಇತರರಿಂದ ಸಾಯಿಸಲ್ಪಟ್ಟಿದ್ದಾನೆ. ತದನಂತರ ನಿನ್ನ ತಮ್ಮನು ಸಾಯಿಸಲ್ಪಟ್ಟಿದ್ದಾನೆ. ಆನಂತರ ಸ್ವಲ್ಪ ಕಾಲಕ್ಕೆ ನಿಮ್ಮ ತಾಯಿಯವರು ಕೂಡ ಸಾಯಿಸಲ್ಪಟ್ಟಿದ್ದಾರೆ. ನಿಮ್ಮ ಕುಟುಂಬದಲ್ಲಿ ನೀನೊಬ್ಬನೆ ಉಳಿದಿದ್ದೀಯಾ. ನಿಮ್ಮ ಕುಟುಂಬದಲ್ಲಿನ ಸಾವುಗಳ ಹಿಂದೆ ಯಾರೂ ಶತ್ರುಗಳು ಇಲ್ಲ. ನಿಮ್ಮನ್ನು ನೀವೇ ಸಾಯಿಸಿಕೊಳ್ಳುವುದು ವಿಶೇಷ. ಮೊದಲು ನಿಮ್ಮ ತಂದೆಯನ್ನು ಆತನ ತಮ್ಮಂದಿರು ಸಾಯಿಸಿದ್ದಾರೆ. ಕಾಮಾಲೆ ರೋಗಿಗೆ ಮಾಂಸವನ್ನಿಟ್ಟು ಅದು ವಿಷವಾಗಿ ಕೆಲಸಮಾಡಿ ಸಾಯಿಸುತ್ತದೆಂದು ತಿಳಿದು ನಿನ್ನ ತಂದೆ ಕಾಮಾಲೆಯ ರೋಗದಿಂದ ಇರುವಾಗ ನಿಮ್ಮ ಚಿಕ್ಕಪ್ಪನವರು ಮಾಂಸವನ್ನು ಆಹಾರವಾಗಿ ಕೊಟ್ಟಿದ್ದಾರೆ. ಅದನ್ನು ತಿಂದ ಮೂರು ದಿನಗಳಿಗೆ ನಿಮ್ಮ ತಂದೆ ಮರಣಿಸಿದ್ದಾನೆ. ಅದು ಮರ್ಡರೇ (ಹತ್ಯೆ) ಅದರೂ ಅದನ್ನು ಹತ್ಯೆ ಎಂದು ಯಾರೂ ಕರೆಯುವುದಕ್ಕೆ ಅವಕಾಶವಿಲ್ಲ. ಹಾಗೆ ಸ್ವಲ್ಪಕಾಲಕ್ಕೆ ನಿನ್ನ ತಮ್ಮನನ್ನು ಆತನ ಹೆಂಡತಿಯೇ ಕುಡಿಯುವುದರಲ್ಲಿ ವಿಷ ಇಟ್ಟು ಸಾಯಿಸಿದ್ದಾಳೆ. ಅದು ಕೂಡಾ ಹತ್ಯೆ ಆದರೂ ಅದನ್ನು ಆತ್ಮಹತ್ಯೆಯಾಗಿ ಚಿತ್ರೀಕರಿಸಿದ್ದಾರೆ. ಹತ್ಯೆ ಎಂದು

ಯಾರಿಗೂ ತಿಳಿದಿಲ್ಲ. ಸ್ವಲ್ಪಕಾಲಕ್ಕೆ ನಿಮ್ಮ ತಾಯಿ ಸಹ ಸಾಯಿಸಲ್ಪಟ್ಟಿದ್ದಾಳೆ. ನಿಮ್ಮ ತಂದೆಯನ್ನು, ನಿನ್ನ ತಮ್ಮನನ್ನು ಆದವರು, ಹತ್ತಿರದವರು ಸಾಯಿಸಿದಾಗ ನಿಮ್ಮ ತಾಯಿಯನ್ನು ಸಹ ಕತ್ತು ಹಿಸಿಕಿ ಸಾಯಿಸಿ ಹಾವಿನಕಡಿತದಿಂದ ಮರಣಿಸಿದ್ದಾಳೆಂದು ಹೇಳಿದ್ದಾರೆ. ನಿಮ್ಮ ತಾಯಿಯನ್ನು ಸ್ವತಃ ನೀನೇ ಸಾಯಿಸಿ ಯಾರಿಗೂ ತಿಳಿಯದಂತೆ ಮಾಡಿ ಹಾವು ಕಚ್ಚಿ ಸತ್ತುಹೋಗಿದ್ದಾಳೆಂದು ಹೇಳಿದ್ದೀಯಾ. ಅದರಿಂದ ಆಕೆಯೂ ಸಹ ಸಾಯಿಸಲ್ಪಟ್ಟಿದ್ದಾಳೆಂದು ಯಾರಿಗೂ ತಿಳಿಯದಂತೆ ಹೋಗಿದೆ.

ನಿಮ್ಮ ಕುಟುಂಬದಲ್ಲಿ ನಾಲ್ಕು ವ್ಯಕ್ತಿಗಳಿದ್ದರೆ ಮೂವರು ಆಕಾಲ ಮರಣವಾಗಿ ಕೊಲ್ಲಲ್ಪಟ್ಟಾಗ, ನೀನೊಬ್ಬನು ಉಳಿದ್ದೀಯಾ. ನಿನ್ನ ಸಾವು ಹೇಗೆ ಬರೆದಿಟ್ಟೀದೆಯೊ? ನೀನು ಪೊಲೀಸ್ ಇನ್ಸ್ಪೆಕ್ಟರ್ ಆದ್ದರಿಂದ ನನ್ನನ್ನು ಯಾರೂ ಏನು ಮಾಡಲಾರರು ಎಂದುಕೊಂಡಿರುತ್ತೀಯಾ. ಯಾರ ಕರ್ಮ ಹೇಗಿದೆಯೊ ಯಾರಿಗೂ ತಿಳಿದಿಲ್ಲ. ಇರುವ ಕರ್ಮ ತಿಳಿಯುವುದಿಲ್ಲ ಆದರೆ, ಈಗ ಹೊಸದಾಗಿ ಸಂಪಾದಿಸಿಕೊಳ್ಳುವ ಕರ್ಮ ಹೊರಗೆ ಕಾಣಿಸುವಂತಿದೆ. ಪ್ರಪಂಚ ವಿಷಯಗಳಲ್ಲಿ ನಿನಗೆ ತಿಳಿಯದೆಯೇ ಹೆಚ್ಚಾಗಿ ಪಾಪಗಳನ್ನು ಸಂಪಾದಿಸಿಕೊಂಡಿದ್ದೀಯಾ. ನಿನ್ನ ದೃಷ್ಟಿಯಲ್ಲಿ ದೇವರೆಂದರೂ, ದೇವರ ಜ್ಞಾನವೆಂದರೂ ಬಹಳ ಕೇವಲವಾಗಿ ಇರುವುದರಿಂದ ದೈವಜ್ಞಾನದಲ್ಲಿ ಕೂಡಾ ಅಧಿಕವಾಗಿ ಪಾಪವನ್ನು ಸಂಪಾದಿಸಿಕೊಂಡಿದ್ದೀಯಾ. ದೈವಮಾರ್ಗದಲ್ಲಿ ಅಂದರೆ ದೇವರ ವಿಷಯದಲ್ಲಿ ನೀನು ಸಂಪಾದಿಸಿದ ಪಾಪವನ್ನು ಕುರಿತು ಹೇಳುತ್ತಿದ್ದೇನೆ ಚೆನ್ನಾಗಿ ಗ್ರಹಿಸು.

ದೇವರ ಜ್ಞಾನವನ್ನು ಪುಸ್ತಕ ರೂಪದಲ್ಲಿ ಪ್ರಚಾರ ಮಾಡುವವರು ನೀನು ಉದ್ಯೋಗ ಮಾಡುವ ಊರಿನಲ್ಲಿ ಮನೆಮನೆ ತಿರುಗಿ ಪ್ರಚಾರ ಮಾಡುತ್ತಿರುವಾಗ, ಅವರನ್ನು ಕರೆದು ಕಳ್ಳರನ್ನು ಬೈಯ್ದಂತೆ ಬೈದಿದ್ದೀಯಾ. ಕಾಷಾಯ ಬಟ್ಟೆಗಳು ಧರಿಸಿ ಸನ್ಯಾಸಿಯಾಗಿರುವ ವ್ಯಕ್ತಿಯನ್ನು ಸಹ ಬಿಡದಂತೆ ಹೊಡೆಯಲು ಹೋಗಿದ್ದೀಯಾ. ಅವರು ದೊಡ್ಡ ಆಧ್ಯಾತ್ಮಿಕ ಸಂಸ್ಥೆಯಿಂದ

ಬಂದವರೆಂದು, ಅವರು ಜ್ಞಾನವನ್ನೇ ಪ್ರಚಾರ ಮಾಡುತ್ತಿದ್ದಾರೆಂದು ನಿನಗೆ ಮೊದಲೆ ತಿಳಿದಿದೆ. ನೀನು ಆಶ್ರಮವಿರುವ ಊರಿನಲ್ಲಿ ಕೆಲಸ ಮಾಡಿದ್ದೀಯಾ. ಆದುದರಿಂದ ಅವರು ಇಂತಹವರೆಂದು ನಿನಗೆ ತಿಳಿದಿದೆ. ಆದರೂ ಊರಿನಲ್ಲಿ ಕಳ್ಳತನ ಮಾಡಲು ಊರೆಲ್ಲಾ ತಿರುಗಿ ನೋಡಿಕೊಳ್ಳುತ್ತಿದ್ದಾರೆಂದು, ಅದೇ ಕೆಲಸವಾಗಿ ಆರೋಪಣೆ ಮಾಡಿ, ಅವರನ್ನು ಎರಡುಗಂಟೆಗಳಕಾಲ ಸ್ಟೇಷನ್‌ನಲ್ಲಿ ಇಟ್ಟುಕೊಂಡು ಮಾನಸಿಕವಾಗಿ ವೇಧಿಸಿರುವೆ. ನಿನ್ನ ಬಾಯಿಗೆ ಬಂದಂತೆ ದೂಷಣೆಯಾಗಿ ಮಾತನಾಡಿದ್ದೀಯಾ. ಆ ಊರಿನಿಂದ ತಕ್ಷಣ ಹೋಗೆಂದು ಹೇಳಿ ಕಳಿಸಿರುವೆ. ಗಂಟೆಯೊಳಗೆ ಊರುಬಿಟ್ಟು ಹೋಗದಿದ್ದರೆ ಲಾಠಿಗಳಿಂದ ಹೊಡೆಯುತ್ತೇನೆಂದು ಬೆದರಿಸಿ ಕಳಿಸಿದ್ದೀಯಾ. ಅಲ್ಲಿ ಪ್ರಚಾರ ಬಾಧ್ಯತೆಯಲ್ಲಿ ಬಂದಿರುವ ಸ್ವಾಮೀಜಿ ನಿನ್ನ ಕುಲದವನೆಯೆಂದು ತಿಳಿದಿದೆ. ಆತನು ಆಫೀಸ್ ಪದವಿಯಿಂದ ರಿಟೈರ್ಡ್ ಆದನಂತರ ಸನ್ಯಾಸತ್ವವನ್ನು ಸ್ವೀಕರಿಸಿ ದೈವಸೇವೆಗಾಗಿ ಜ್ಞಾನಪ್ರಚಾರವನ್ನು ಮಾಡುತ್ತಿದ್ದಾನೆಂದು ತಿಳಿದಿದೆ. ಆ ಸ್ವಾಮೀಜಿಗೆ ಬರುವ ಪಿಂಚಣಿಯ ಹಣ ನಿನ್ನ ಸಂಬಳಕ್ಕಿಂತ ಹೆಚ್ಚೆಂದು ಸಹ ತಿಳಿದಿದೆ. ಎಲ್ಲಾ ತಿಳಿದು ಅವರನ್ನು ಕಳ್ಳರನ್ನು ದಂಡಿಸಿದಂತೆ ದೂಷಿಸಿ, ಒಂದು ಸಮಯದಲ್ಲಿ ಹೊಡೆಯುವುದಕ್ಕೆ ಹೋಗಿ ಭಯಪಡುವಂತೆ ಮಾಡಿ ಕಳಿಸಲಾಗಿದೆ. ನೀನು ಹೀಗೆ ಮಾಡುವುದು ನಿನ್ನಲ್ಲಿರುವ ಅಸೂಯೆಯೇ ಕಾರಣವೆಂದು ಹೇಳಬಹುದು. ಅಸೂಯೆಯೊಂದಿಗೆ ನಿನ್ನಲ್ಲಿನ ಗರ್ವ ಕೂಡಾ ನಿನ್ನನ್ನು ಹಾಗೆ ಮಾಡಿಸಿದೆ. ನೀನು ಊರವಕೊಂಡ ಪಕ್ಕದ ಗ್ರಾಮದಲ್ಲಿ ಉದ್ಯೋಗ ಇಲ್ಲದಿರುವಾಗ ಉದ್ಯೋಗ ದೊರೆತರೆ ಸಾಕೆಂದು ಉದ್ಯೋಗಕ್ಕಾಗಿ ಪ್ರಯತ್ನಗಳು ಮಾಡಿದಾಗ, ನಿನ್ನ ಕರ್ಮಕ್ಕೆ ತಕ್ಕಂತೆ ಉದ್ಯೋಗ ದೊರೆತಿದೆ. ಉದ್ಯೋಗ ಬಂದ ನಂತರ ನಿನ್ನ ಕಣ್ಣುಗಳು ತಲೆಮೇಲಕ್ಕೆ ಹೋಗಿವೆ.

ಸರ್ವ ಪ್ರಪಂಚದಲ್ಲಿ ಎಲ್ಲರ ಹಿಂದೆಯಿದ್ದು ನಡೆಸುವ ದೇವರ ಬಗ್ಗೆ ಸ್ವಲ್ಪವೂ ಗೌರವ ಇಲ್ಲದಂತಿರುವುದು, ಪ್ರಪಂಚಕ್ಕೆಲ್ಲಾ ದೇವರು ದೊಡ್ಡವನು ಎಂದು ತಿಳಿದುಕೊಳ್ಳದೆ ನಿನಗೆ ನೀನೇ ದೊಡ್ಡವನು ಎಂದುಕೊಳ್ಳುವುದು,

ದೊಡ್ಡವರು ಚಿಕ್ಕವರು ಎಂಬ ತಾರತಮ್ಯ ಇಲ್ಲದಂತೆ ಅಧಿಕಾರ ಕೈಯಲ್ಲಿದೆಯೆಂದು ದೊಡ್ಡವರನ್ನು ಸಹಿತವು, ದೈವಜ್ಞಾನಿಗಳನ್ನು ಸಹಿತವು ದೂಷಿಸಿ ಮಾತನಾಡುವುದು ಮಾಡಿದ್ದೀಯಾ. ನನ್ನನ್ನು ಯಾರು ಏನು ಮಾಡಲಾರರೆನ್ನುವ ಧೀಮಾ ನಿನ್ನ ಉದ್ಯೋಗದಿಂದ ನಿನಗೆ ಬಂದಿದೆ. ನೀನು ಮಾಡುತ್ತಿರುವ ಉದ್ಯೋಗ ಸ್ವಲ್ಪಕಾಲ ಇರುವುದೇಯೆಂದು ಮರೆತುಹೋಗಿದ್ದೀಯಾ. ನಿಮ್ಮ ಕುಟುಂಬದಲ್ಲಿ ಎಲ್ಲರೂ ಹತ್ಯಯೇ ಮಾಡಲ್ಪಟ್ಟಿದ್ದಾರೆ. ನಿನಗೂ ಕೂಡಾ ಅದೇ ಹಣೆಬರಹ ಇರುತ್ತದೆ. ಈಗಾಗಲೇ ನೀನು ಜ್ಞಾನದ ಬಗ್ಗೆ ವಿರೋಧತೆ, ದೇವರ ಬಗ್ಗೆ ಭಯವಿಲ್ಲದೆ ಪ್ರವರ್ತಿಸಿದ್ದೀಯಾ. ನಿನ್ನ ನಡುವಳಿಕೆಯನ್ನು ಆಕಾಶದಿಂದ ಭೂತಗಳು ಗ್ರಹಿಸಿವೆ. ಆಕಾಶ ಭೂತಗಳು ರೋಗಗಳ ರೂಪವಾಗಿ ಪೀಡಿಸಬಲ್ಲವು. ಪ್ರಪಂಚ ವಿಷಯದಲ್ಲಾದರೂ ನಿರಪರಾಧಿಗಳನ್ನು ಅಪರಾಧಿಗಳಾಗಿ ಚಿತ್ರಿಸಿ ಮಾತನಾಡಿದರೆ ಅವರನ್ನು ಕ್ಯಾನ್ಸರ್ ಭೂತ ಬಿಡುವುದಿಲ್ಲವೆಂದು, ಅದು ಪ್ರಪಂಚ ಪಾಪವಾದರೂ ತಪ್ಪದೆ ಕ್ಯಾನ್ಸರ್ ರೂಪದಲ್ಲಿ ಅನುಭವಿಸಬೇಕೆಂದು ಮೊದಲೇ ಹೇಳಿದ್ದೇವೆ. ನೀನು ಜ್ಞಾನಿಗಳನ್ನು, ದೈವ ಜ್ಞಾನವನ್ನು ನಿಂದಿಸುವುದು, ಕಳ್ಳರಿಗೆ ಹೋಲಿಸಿ ಮಾತನಾಡುವುದು ನಡೆದಿದೆ. ಜ್ಞಾನಕ್ಕು ದೇವರಿಗು, ನೀನು ಪೂರ್ತಿ ವಿರುದ್ಧವಾಗಿ ಮಾತನಾಡುವುದಾಗಿದೆ. ಆದುದರಿಂದ ನೀನು ಕ್ಷಮಿಸಲಾರದ ಪಾಪವನ್ನು ಪಡೆದಿದ್ದೀಯಾ.

ಪಾಪ ಎಂದರೆ ಅದು ಈಗ ಕಾಣಿಸುವುದಲ್ಲ. ಅನುಭವಿಸುವಾಗ ಅದರ ಬಾಧೆ ಹೇಗಿರುತ್ತದೊ ತಿಳಿಯುತ್ತದೆ. ಎಷ್ಟೋ ಜನ ಭೂಮಿಮೇಲೆ ಪಾಪವನ್ನು ರೋಗಗಳ ರೂಪದಲ್ಲಾಗಲಿ, ಕಷ್ಟಗಳ ರೂಪದಲ್ಲಾಗಲಿ, ಬಾಧೆಗಳ ರೂಪದಲ್ಲಾಗಲಿ ಅನುಭವಿಸುತ್ತಲೇ ಇದ್ದಾರೆ. ಆದರೂ ಆ ಬಾಧೆಗಳು, ಆ ಕಷ್ಟಗಳು, ಅ ರೋಗಗಳು ಸ್ವತಃ ಅವರು ಮಾಡಿಕೊಂಡ ಪಾಪಗಳಿಂದ ಬಂದಿರುವವೇಯೆಂದು ಬಹಳಜನರಿಗೆ ತಿಳಿದಿಲ್ಲ. ಸ್ವಲ್ಪ ಜ್ಞಾನ ತಿಳಿದವರಿಗೆ ಮಾತ್ರವೆ ಪಾಪದಿಂದಲೇ ಕಷ್ಟಗಳು, ರೋಗಗಳು, ಬಾಧೆಗಳು ಬರುತ್ತಿವೆಯೆಂದು

ಅರ್ಥವಾಗುತ್ತಿದೆ. ಹಾಗೆ ಅರ್ಥವಾಗಿರುವುದರಿಂದ ಅವರು ಆ ಬಾಧೆಗಳಿಗೆ ಪರಿಷ್ಕಾರಮಾರ್ಗವಾದ ದೈವಜ್ಞಾನವನ್ನು ಆಶ್ರಯಿಸಿ ದೇವರೊಂದರ ಕ್ಷಮಾಶೀಲತೆಯನ್ನು ಹೊಂದಬಹುದು. ಅನುಭವಿಸುವ ಬಾಧೆಯಾಗಲಿ, ರೋಗವಾಗಲಿ ಯಾವುದರಿಂದ ಬಂದಿದೆಯೊ, ಅದಕ್ಕೆ ಕಾರಣವೇನೊ ತಿಳಿಯದಿದ್ದರೆ, ಅಂತಹವನು ಪಾಪವೊಂದರ ಕ್ಷಮಾಶೀಲತೆಯನ್ನು ಹೊಂದುವ ಅವಕಾಶವೇ ಇರುವುದಿಲ್ಲ. ಈದಿನ ಪ್ರಪಂಚ ಸಂಬಂಧವಾದ ಪಾಪಗಳನ್ನು ಅನುಭವಿಸುವವರು, ಅವರು ಅನುಭವಿಸುವ ಬಾಧೆಗಳಿಗು, ರೋಗಗಳಿಗು, ಕಷ್ಟಗಳಿಗು ಕಾರಣ ತಿಳಿಯದಿರುವುದರಿಂದ, ಅವರು ಮಾಡಿಕೊಂಡ ಪಾಪಗಳೇ ಬಾಧೆಗಳೆ, ವ್ಯಾಧಿಗಳ ರೂಪಗಳಲ್ಲಿ ಬಾಧಿಸುತ್ತಿವೆಯೆಂದು ತಿಳಿಯದಿರುವುದರಿಂದ, ಅಂತಹವರು ಅದಕ್ಕೆ ಪರಿಷ್ಕಾರವಾದ ಜ್ಞಾನವನ್ನು ಆಶ್ರಯಿಸುವುದಿಲ್ಲ. ಪಾಪ ನಿರ್ಮೂಲನೆ ಮಾಡಿಕೊಳ್ಳಲಾರರು. ಆದುದರಿಂದ ಅವರು ಮಾಡಿಕೊಂಡ ಪಾಪ ಎಲ್ಲವನ್ನು ಅನುಭವಿಸುತ್ತಿದ್ದಾರೆ. ಪ್ರಪಂಚ ಪಾಪದಿಂದ ಹೊರಬೀಳುವ ಅವಕಾಶವಿದ್ದರೂ ಅವನಿಗೆ ಆ ವಿಧಾನ ಅರ್ಥವಾಗದೆ, ತಪ್ಪದೆ ಅನುಭವಿಸಬೇಕಾಗಿ ಬರುತ್ತದೆ. ಇದೆಲ್ಲವೂ ಪ್ರಪಂಚ ಸಂಬಂಧ ಪಾಪಗಳ ಬಗ್ಗೆ ಇರುವ ವಿಧಾನವಾಗಿದ್ದು, ದೈವಸಂಬಂಧ ಪಾಪಗಳ ಬಗ್ಗೆ ಇರುವ ವಿಧಾನ ಅನುಭವಿಸುವುದು ಹೊರತು ತಪ್ಪಿಸಿಕೊಳ್ಳುವುದೇ ಇಲ್ಲ.

ದೈವ ಸಂಬಂಧವಾದ ಪಾಪವನ್ನು, ನಿನ್ನಂತಹ ಕೊಬ್ಬು ತುಂಬಿರುವವರು, ದೇವರೆಂದರೆ ಭಯವಿಲ್ಲದವರು, ಜ್ಞಾನವೆಂದರೆ ಗೌರವಿಲ್ಲದವರು ಹೊಂದುತ್ತಿರುತ್ತಾರೆ. ನೀನು ಯಾವಾಗಾದರೆ ದೈವಜ್ಞಾನವನ್ನು ಆತಂಕಪಡಿಸಿ, ಪ್ರಚಾರ ಮಾಡುವವರನ್ನು ಹೀನವಾಗಿ ದೂಷಿಸಿ ಕಳಿಸಿರುವೆಯೊ, ಆ ದಿನವೇ ದೇವರಿಗೆ ವಿರುದ್ಧವಾಗಿ ನಮೊದಾದ ಪಾಪವು ನಿನ್ನನ್ನು ಸೇರಿದೆ. ಅಂದರೆ ಕ್ಷಮಿಸಲಾರದ ಪಾಪವನ್ನು ನೀನು ಹೊಂದಿರುವೆ ಎಂದು ಹೇಳುತ್ತಿದ್ದೇವೆ. ಎಲ್ಲಾ ತಿಳಿದು ಅನವಶ್ಯವಾಗಿ ಜ್ಞಾನವನ್ನು, ಜ್ಞಾನಿಗಳನ್ನು ಅಗೌರವಾಗಿ

ಮಾತನಾಡಿರುವುದಕ್ಕೆ, ದೂಷಿಸಿ ಮಾತನಾಡಿರುವುದಕ್ಕೆ 'ದೈವದ್ರೋಹ' ಪಾಪವು ನಿನ್ನನ್ನು ಸೇರಿದೆ. ದೈವ ದೂಷಣೆಗೆ ಕಾರಣವಾಗಿ ಬಂದಿರುವ ಪಾಪವನ್ನು ತಪ್ಪದೆ ಅನುಭವಿಸಬೇಕೆಂದು ಮೊದಲೆ ಹೇಳಿದ್ದೇವೆ. ಅದನ್ನು 'ಕ್ಷಮಿಸಲಾರದ ಪಾಪ' ಎಂದು ಕೂಡಾ ಕರೆಯುತ್ತಿದ್ದೇವೆ. ಕ್ಷಮಿಸಲಾರದ ಪಾಪ ಜ್ಞಾನದಿಂದ ಕ್ಷಮಿಸಲ್ಪಡುವುದಿಲ್ಲ. ದೇವರು ಸಹ ತನಗೆ ವಿರುದ್ಧವಾಗಿ ಸಂಪಾದಿಸಿಕೊಂಡವನ ಕರ್ಮವನ್ನು ಕ್ಷಮಿಸುವುದಿಲ್ಲ. ದೈವ ವಿರೋಧ ಕರ್ಮ ಒಂದು ನಿಮಿಷ ಮಾಡಿಕೊಂಡಿರುವುದಾದರೂ, ಅದು ಒಂದು ದಿನಕ್ಕೆ ಮುಗಿದುಹೋಗುವುದಿಲ್ಲ. ದೈವ ವಿರೋಧ ಕರ್ಮ ಒಂದು ನಿಮಿಷ ಮಾಡಿಕೊಂಡಿರುವುದಾದರೂ ಎರಡು ಯುಗಗಳವರೆಗು ನಿತ್ಯ ಅನುಭವಿಸಬೇಕಾಗಿರುತ್ತದೆ. ಅಂತಹ ಭಯಂಕರವಾದ ದೈವದ್ರೋಹ ಪಾಪ, ದೈವಜ್ಞಾನ ವಿರೋಧ ಪಾಪವನ್ನು ನೀನು ಒಂದುಸಲ ಸಂಪಾದಿಸಿಕೊಳ್ಳಲಿಲ್ಲ. ನಿನ್ನ ಜೀವನದಲ್ಲಿ ಹತ್ತುಸಲ ಅಂತಹ ಕ್ಷಮಾಶೀಲತೆ ಇಲ್ಲದ ಪಾಪವನ್ನು ಸಂಪಾದಿಸಿಕೊಂಡಿದ್ದೀಯಾ. ಇದನ್ನೇ ವಿವರವಾಗಿ ಹೇಳಿದರೆ ಇಪ್ಪತ್ತು ಯುಗಗಳವರೆಗು ಅಂದರೆ ಕೆಲವು ಲಕ್ಷಗಳ ವರ್ಷಗಳವರೆಗು ಪಾಪವನ್ನು ನಿತ್ಯ ಅನುಭವಿಸಬೇಕಾಗಿರುತ್ತದೆ. ಅಷ್ಟು ಪಾಪವನ್ನು "ನೀನು ಜ್ಞಾನಿ" ಎಂದರೂ, "ಜ್ಞಾನಿಗಳು" ಎಂದರೂ ಭಯ ಇಲ್ಲದಂತಿರುವುದರಿಂದ ಅವರಿಗೆ, ಅವರ ಜ್ಞಾನಕ್ಕೆ ವಿರುದ್ಧವಾಗಿ ಪ್ರವರ್ತಿಸುವುದರಿಂದ ಮಾಡಿಕೊಂಡಿರುವುದೆಂದು ಹೇಳುತ್ತಿದ್ದೇವೆ. ನೀನು ಹತ್ತುಸಲ ದೈವದೂಷಣೆ ಮಾಡಿ ಸಂಪಾದಿಸಿಕೊಂಡ ಪಾಪ ಕೆಲವು ಗಂಟೆಗಳಲ್ಲಿನದೆ. ಆ ಕೆಲವು ಗಂಟೆಗಳ ಪಾಪವು ಕೆಲವು ಲಕ್ಷ ವರ್ಷಗಳು ಪಾಪ ಅನುಭವಿಸುವುದಕ್ಕೆ ಕಾರಣವಾಗಿದೆ. ನೀನು ಈಗ ದೇವರನ್ನು ಬೇಡಿಕೊಂಡರು ದೇವರು ಕೂಡಾ ನಿನ್ನನ್ನು ಏನು ಮಾಡಲಾರನು. ಎಲ್ಲರ ಪಾಪಗಳನ್ನು ಕ್ಷಮಿಸುವ ದೇವರು ನಿನ್ನ ಪಾಪವನ್ನು ಮಾತ್ರ ಕ್ಷಮಿಸುವುದಿಲ್ಲ. ಕ್ಷಮಿಸದಿರುವುದಲ್ಲದೆ ದೈವದೂಷಣೆ ಪಾಪ ಮುಗಿದುಹೋಗುವವರೆಗು ಅಂದರೆ ಇಪ್ಪತ್ತು ಯುಗಗಳವರೆಗು ನಿನಗೆ ಜ್ಞಾನವೊಂದರ ಗಟ್ಟು (ದಡ) ಸಿಗದಂತೆ ಮಾಡುತ್ತದೆ. ಆದ್ದರಿಂದ ಯಾರು ಹೇಳಿದರೂ, ಎಷ್ಟು ಹೇಳಿದರೂ ನಿನ್ನ

ಬುದ್ಧಿಗೆ ದೈವಜ್ಞಾನ ಮಾತ್ರ ಅರ್ಥವಾಗುವುದಿಲ್ಲ. ಇಪ್ಪತ್ತು ಯುಗಗಳ ಪರ್ಯಂತವು ನಿನಗೆ ದೈವಜ್ಞಾನ ಅರ್ಥ ಆಗುವುದಿಲ್ಲವೆಂದು, ಜ್ಞಾನಕ್ಕೆ ದೂರವಾಗಿ ಇರಬೇಕಾಗಿದ್ದೆಯೆಂದು ಹೇಳುತ್ತಿದ್ದೇನೆ.

ನಿನಗೆ ಲೇಖ ರೂಪದಲ್ಲಿ ಉತ್ತರವನ್ನು ಬರೆದರೂ ಪ್ರಯೋಜನೆ ಇಲ್ಲವೆಂದು ನನಗೆ ತಿಳಿದಿದೆ. ನಿನ್ನಲ್ಲಿ ಯಾವ ಬದಲಾವಣೆ ಬರದಿರುವುದಕ್ಕು ದೇವರ ಜ್ಞಾನಕ್ಕೆ ದೂರವಾಗಿ ಇರುವುದಕ್ಕು ದೇವರೇ ನಿರ್ಣಯಿಸಿದ್ದಾನೆಂದು ತಿಳಿದು ಉತ್ತರ (ಪತ್ರ) ಬರೆದಿದ್ದೇನೆ. ನನ್ನ ಉತ್ತರದಿಂದ ನಿನಗೆ ಏನು ಪ್ರಯೋಜನೆ ಇಲ್ಲವಾಗಲಿ ಈ ಉತ್ತರವನ್ನು ಓದಿದ ಉಳಿದ ಪ್ರಜೆಗಳು ಪಾಪದ ಬಗ್ಗೆ ಜಾಗ್ರತೆಯಾಗಿರುತ್ತಾರೆಂದು ತಿಳಿದುಕೊಳ್ಳುತ್ತಿದ್ದೇನೆ. ನೀನು ಈ ಜನ್ಮದಲ್ಲಿ ಎಷ್ಟುಕಾಲ ಇರುತ್ತೀಯೊ ಅಷ್ಟುಕಾಲ ನಿನಗೆ ನಿರ್ಣಯಿಸಲ್ಪಟ್ಟ ಪ್ರಾರಬ್ಧಕರ್ಮ ಪ್ರಕಾರ ನಡೆಯುತ್ತದೆ. ನಿನ್ನ ಮರಣದ ನಂತರ ಬರುವ ಜನ್ಮ ಪಾಪಭೂಯಿಷ್ಟವಾದುದಾಗಿ ಇರುತ್ತದೆ. ಇಪ್ಪತ್ತು ಯುಗಗಳವರೆಗು ದೇವರ ಶಾಪ ನಿನ್ನಮೇಲೆ ಇರುತ್ತದೆ. ನಿನ್ನ ಉದ್ಯೋಗವನ್ನು ನೋಡಿಕೊಂಡು ಸ್ವಲ್ಪವೂ ದೊಡ್ಡವರು ಚಿಕ್ಕವರು ಇಲ್ಲದಂತೆ ಪ್ರವರ್ತಿಸಿರುವುದಕ್ಕೆ ಬಂದಿರುವ ಪಾಪವನ್ನು ಅನುಭವಿಸಬೇಕಾಗಿದೆಯೆಂದು ಈಗಲಾದರೂ ತಿಳಿದುಕೊ. ಸ್ವಲ್ಪಮಟ್ಟಿನ ನಿನ್ನ ಜೀವನದಲ್ಲಿ ಇನ್ನೊಂದುಸಲ ದೈವವಿರೋಧ ಕಾರ್ಯಗಳು ಮಾಡಬೇಡ, ಜ್ಞಾನಿಗಳನ್ನು ಅವಮಾನ ಮಾಡಬೇಡ. ನನ್ನ ಬುದ್ಧಿ ಏಕೆ ಹೋಗುತ್ತದೆಂದು ನೀನು ಹಾಗೆಯೇ ಮಾಡಿದರೆ ದೇವರು ನಿನ್ನನ್ನು ಬಿಡುವುದಿಲ್ಲ. ಮತ್ತೊಮ್ಮೆ ಕ್ಷಮಿಸದ ಪಾಪವನ್ನು ಅಂಟಗಟ್ಟುತ್ತಾನೆ. ಇದಕ್ಕಿಂತ ನಿನಗೆ ಹೆಚ್ಚಾಗಿ ಹೇಳುವುದು ಅನವಶ್ಯ.

ಇಂತಿ

***ಆಚಾರ್ಯ ಪ್ರಬೋಧಾನಂದ ಯೋಗೀಶ್ವರರು.***

ಇಲ್ಲಿಯವರೆಗು ಐದು ವಿಧಗಳ ಮನುಷ್ಯರಿಗೆ ಅವರು ಮಾಡಿದ ಕೆಲಸಗಳನ್ನು, ಅವರು ಸಂಪಾದಿಸಿಕೊಂಡ ಕರ್ಮಗಳನ್ನು ಕುರಿತು ಹೇಳಿದ್ದೇವೆ. ಅವರ ಪಾಪಗಳನ್ನು ಹೇಳುವುದಲ್ಲದೆ, ಕೆಲವರಲ್ಲಿ ನನ್ನ ಉತ್ತರದಿಂದ ಬದಲಾವಣೆ ತಂದುಕೊಳ್ಳಿರೆಂದು ಹೇಳಿದ್ದೇನೆ. ನನ್ನ ಉತ್ತರದಿಂದ ಕೆಲವರಾದರೂ ಒಳ್ಳೆಯವರಾಗುವವರಿರಬಹುದು. ನಾನು ಬರೆದ ಐದು ಲೇಖನಗಳಲ್ಲಿ ಒಬ್ಬ ಮನುಷ್ಯನಾದರೂ ಬದಲಾವಣೆಹೊಂದಿ ಜ್ಞಾನದಮೇಲೆ ಆಸಕ್ತಿ ಇರುವವನಾಗ ಬೇಕೆಂದು ನಾನು ಅಂದುಕೊಳ್ಳುತ್ತಿದ್ದೇನೆ. ಕೆಲವರಲ್ಲಿ ಬದಲಾವಣೆ ಬರುವುದಿಲ್ಲ ವೆಂದು ಗೊತ್ತು. ಆದರೆ ಅವರಿಗೋಸ್ಕರ ಬರೆಯಬೇಕಾದ ಕೆಲಸವಿಲ್ಲ. ಬದಲಾಗುವವರಿಗೆ ಈ ಲೇಖನಗಳೆಂದು, ಅವರನ್ನೇ ಈ ಲೇಖಗಳು ಬದಲಾವಣೆತಂದು ಒಳ್ಳೆಯಮಾರ್ಗದಲ್ಲಿ ಪ್ರಯಾಣಿಸುವಂತೆ ಮಾಡುತ್ತವೆಂದು ಹೇಳುತ್ತಿದ್ದೇವೆ. ಮನುಷ್ಯನಲ್ಲಿ ಗುಣಗಳೆ ಮನುಷ್ಯನನ್ನು ನಡೆಸುವ ಚುಕ್ಕಾಣಿ ಯಂತದು. ಆ ಗುಣಗಳ ಪ್ರಭಾವದಿಂದಲೇ ಮನುಷ್ಯ ತನ್ನ ಭಾವನೆಯನ್ನು ವ್ಯಕ್ತ ಮಾಡುತ್ತಿದ್ದಾನೆ. ಮನುಷ್ಯ ವ್ಯಕ್ತ ಮಾಡುವ ಮಾತುಗಳನ್ನನುಸರಿಸಿ, ಮಾತುಗಳಲ್ಲಿನ ಭಾವನೆಯನ್ನು ತಿಳಿಯಬಹುದು. ನನ್ನ ಅನುಭವದಲ್ಲಿರುವ ಒಂದು ಸಂಘಟನೆಯನ್ನು ಹೇಳುತ್ತೇನೆ ಕೇಳಿರಿ. ನನಗೆ 1994 ವರ್ಷದಿಂದ ಗನ್‌ಲೈಸೆನ್ಸು ಇದೆ. ಲೈಸೆನ್ಸ್‌ಗೆ ರೆನ್ಯುವಲ್‌ಗಾಗಿ ಕಳಿಸಿದಾಗ ಗನ್‌ನಿಂದ ರಿವಾಲ್ವರ್‌ಗೆ ಬದಲಿಸಿಕೊಳ್ಳುವುದು ನಡೆದಿದೆ. ಆಗ ತಪ್ಪದೆ ಪೊಲೀಸ್ ಸ್ಟೇಷನ್‌ಗೆ ಹೋಗಬೇ ಕಾಗಿ ಬಂದಿದೆ.

ನಾನು ಎಲ್ಲಿಗೆ ಹೋದರೂ ಸರ್ವಸಾಧಾರಣ ಮನುಷ್ಯರಿರುವಂತೆ ಇರುತ್ತೇನೆ. ನನ್ನ ಹತ್ತಿರ ನಾನು ಸ್ವಾಮೀಜಿಯನ್ನುವಂತೆ ಯಾವ ಆಧಾರವು ಇರುವುದಿಲ್ಲ. ಸಾಧಾರಣವಾಗಿ ಹೋಗಿರುವ ನನ್ನನ್ನು ನೋಡಿ ಅಲ್ಲಿನ ಇನ್‌ಸ್ಪೆಕ್ಟರಾಗಿ ಕೆಲಸಮಾಡುತ್ತಿರುವ ವ್ಯಕ್ತಿ ನನ್ನೊಂದಿಗೆ ಮಾತನಾಡುವುದು ನಡೆದಿದೆ. ಆತನು ಮಾತನಾಡುವ ವಿಧಾನ ಒಬ್ಬ ಮನುಷ್ಯನನ್ನು ಯಾವಮಾತ್ರ

ಗೌರವವಿಲ್ಲದ ವಿಧವಾಗಿ ಕಾಣಿಸಿದೆ. ನೀವು ಸ್ವಾಮಿಗಳಾದರೆ ನಿಮಗೆ ಗನ್‌ನಿಂದ ಕೇಲಸವೇನಿದೆ? ಎಂದು ಕೇಳಿದನು. ಅದಕ್ಕೆ ಉತ್ತರವಾಗಿ ನಾನು ಹೀಗೆ ಹೇಳುವುದಾಗಿದೆ. "ನಾನು ಎಷ್ಟುಸ್ವಾಮಿಯಾದರೂ ಒಬ್ಬ ಸಾಧಾರಣ ಮನುಷ್ಯನೆ. ಮನುಷ್ಯನಿಗಿಂತ ದೊಡ್ಡವರು ದೇವತೆಗಳೆಂದು ಎಲ್ಲರೂ ಹೇಳುತ್ತಿರುತ್ತಾರೆ ಅಲ್ಲವೆ! ದೇವತೆಗಳಲ್ಲಿ ದೊಡ್ಡ ದೇವತೆಗಳಾದ ವಿಷ್ಣುವಿಗು, ಶಿವನಿಗು, ಉಳಿದ ಚಿಕ್ಕ ದೇವತೆಗಳಂತಹ ಪ್ರತಿಯೊಬ್ಬರ ಕೈಯಲ್ಲಿ ಆಯುಧಗಳಿವೆ ಅಲ್ಲವೆ! ಅವರು ದೇವತೆಗಳಾದಾಗ ಆಯಧಗಳೇಕೆ? ನಾನು ಮನುಷ್ಯನಾದ್ದರಿಂದ ನನ್ನ ಭಯದಿಂದ ಸ್ವಯಂ ರಕ್ಷಣೆಗೆ ನಾನು ಒಂದು ಆಯುಧವನ್ನು ಇಟ್ಟುಕೊಂಡಿದ್ದೇನೆ. ದೇವತೆಗಳಾದವರೂ ಒಂದು ಆಯುಧದಿಂದ ಇರದೆ ಒಬ್ಬೊಬ್ಬರು ಎರಡು, ನಾಲ್ಕು, ಆರು ಆಯುಧಗಳು ಹೊಂದಿರುವಂತೆ ನೋಡುತ್ತಲೇ ಇದ್ದೇವಲ್ಲವೆ! ಎಲ್ಲರನ್ನು ರಕ್ಷಿಸುವ ದೇವತೆಗಳೇ ಅಷ್ಟು ಆಯುಧಗಳು ಹೊಂದಿರುವಾಗ, ನಾನು ಒಂದು ಆಯುಧ ಹೊಂದಿರುವುದರಲ್ಲಿ ತಪ್ಪು ಇಲ್ಲ ಅಲ್ಲವೆ!" ಎಂದಿದ್ದೇನೆ.

ನನ್ನ ಹತ್ತಿರಕ್ಕೆ ಎಷ್ಟೋಜನ ಭಕ್ತರು ಬರುತ್ತಿರುತ್ತಾರೆ. ತಿಂಗಳಿಗೆ ಕೆಲವು ಸಾವಿರಾರುಜನ ಬಂದರೂ ಅವರಿಗೆ ನನ್ನ ದರ್ಶನ ಸಿಗುವುದಿಲ್ಲ. ನಾನು ಅವರೊಂದಿಗೆ ಮಾತನಾಡುವುದು ಕೂಡಾ ನಡೆಯುವುದಿಲ್ಲ. ಎಷ್ಟೋಜನ ನನ್ನೊಂದಿಗೆ ಮಾತನಾಡಬೇಕೆಂದು, ನನ್ನ ದರ್ಶನ ಬೇಕೆಂದು ಕೆಲವು ತಿಂಗಳಿಂದ ಕಾದುಕೊಂಡಿದ್ದಾರೆ. ಆದರೂ ಅವರಿಗೆ ಕಾಣಿಸದವನು ಅವಶ್ಯಕತೆಯಿದ್ದು ನನ್ನದೊಡ್ಡತನ ಏನು ಕಾಣಿಸದಂತೆ ಸಾಧಾರಣ ವ್ಯಕ್ತಿಯಾಗಿ ನಾನು ಅಲ್ಲಿಗೆ ಹೋದರೆ, ಒಬ್ಬ ಮನುಷ್ಯನನ್ನು ಗೌರವವಾಗಿ ಮಾತನಾಡದಿದ್ದರೂ ಫರವಾಗಿಲ್ಲ ಆದರೆ, ಹೇಳನೆಮಾಡುವ ವಿಧವಾಗಿ ಮಾತನಾಡಬಾರದೆಂದು ಅವರಿಗೆ ತಿಳಿಯದಂತೆಹೋಗಿದೆ. 65 ವರ್ಷಗಳ ವಯಸ್ಸಿರುವ ನನ್ನನ್ನೇ ಅಗೌರವವಾಗಿ ಮಾತನಾಡಿದವರು ಸಾಮಾನ್ಯ ಪ್ರಜೆಗಳ ಹತ್ತಿರ ಇವರ ಪ್ರವರ್ತನೆ ಹೇಗಿರುತ್ತದೊ ಆಲೋಚಿಸಬಹುದು. ಅದಕ್ಕೆ ಗೌರವವಾಗಿ ಬದುಕುವವರು ಪೊಲೀಸ್‌ಸ್ಟೇಷನ್

ಗಳಿಗೆ ಹೋಗಬೇಕೆಂದರೆ ಇಷ್ಟಪಡುವುದಿಲ್ಲ. 20 ವರ್ಷಗಳಿಂದ ನನ್ನ ಹತ್ತಿರ ಗನ್‌ಲೈಸೆನ್ಸ್ ಇರುವಾಗ ಈಗ ಹೊಸದಾಗಿ ನಿಮಗೇನು ಕೆಲಸ ಎಂದು ಕೇಳಬೇಕಾದ ಅವಶ್ಯಕತೆ ಏನಿದೆ? ಅಷ್ಟೇ ಅಲ್ಲದೆ ಆರು ತಿಂಗಳಗೊಂದುಸಲ ಚೆಕಪ್‌ಗೆ ತೆಗೆದುಕೊಂಡು ಬರಬೇಕೆಂದು ಹೇಳುವುದು. ಹಾಗೆ ಬರದಿದ್ದರೆ ನಾನೇ ನಿಮ್ಮ ಮನೆಗೆಬಂದು ಚೆಕ್ ಮಾಡುತ್ತೇನೆಂದು ಹೇಳುವುದು ನೋಡಿದರೆ ಒಬ್ಬ ಕ್ರಿಮಿನಲ್‌ನೊಂದಿಗೆ ಮಾತನಾಡಿದಂತೆ ಮಾತನಾಡುತ್ತಿದ್ದಾನೆನಿಸುತ್ತದೆ. ಇದೆಲ್ಲಾ ನೋಡಿದ ನಂತರ ಇವರಿಗೆ ಮೇಲಿರುವ ಆಫೀಸರ್ಸ್ ಸಂಸ್ಕಾರ ಕಲಿಸಿದರೆ ಸಾಧಾರಣ ಪ್ರಜೆಗಳಿಗೆ ಪೊಲೀಸರ ಭಯ ಹೋಗುತ್ತದೆ. ಯಾವ ಸಮಾಚಾರವನ್ನಾದರೂ ಸ್ಟೇಷನ್‌ಗೆ ಹೋಗಿ ಹೇಳುತ್ತಾರೆ.

ಉದ್ಯೋಗಸ್ತರು ಅಭಿವೃದ್ಧಿಯಾಗುವ ಕೆಲಸ ಮಾಡುತ್ತಿಲ್ಲ ಆದರೆ, ಕೆಳಕ್ಕೆ ಇಳಿಜಾರಿಹೋಗುವ ಕೆಲಸವನ್ನು ಮಾಡುತ್ತಿದ್ದಾರೆ. ಕೆಲವರಿಗೆ ತಮ್ಮ ಉದ್ಯೋಗ ಘನತೆಯ ತಲೆಬಿರುಸುತನಕ್ಕೆ ಕಾರಣವಾಗುತ್ತಿದೆ. ಪ್ರಜೆಗಳನ್ನು ಬೆದರಿಸಿ, ಪೀಡಿಸಿ ಹಣವನ್ನು ಕಿತ್ತುಕೊಳ್ಳುತ್ತಿದ್ದಾರೆ. ಪ್ರತಿ ಉದ್ಯೋಗಿ ತನ್ನ **'ಉದ್ಯೋಗ'** ಎನ್ನುವ ಪದಕ್ಕೆ ತಕ್ಕಂತೆ ನಡೆದುಕೊಳ್ಳದೆ, ತಾನು ಕೂಡಾ ಸಮಾಜದಲ್ಲಿ ಮನುಷ್ಯನೇಯೆಂದು ಮರೆತುಹೋಗಬಾರದು. ಈದಿನ ಪ್ರತಿಕಡೆ ಪ್ರತಿ ಉದ್ಯೋಗಿ ಅಕ್ರಮವಾಗಿ ನಡೆದುಕೊಳ್ಳುವುದರಿಂದ, ಆತನು ಮಾಡುವುದು ಪಾಪವೇಯೆಂದು ಅವರಿಗೆ ತಿಳಿಯದಂತೆ ಹೋಗಿದೆ. ತಿಳಿಯದ ತಪ್ಪುಗಳನ್ನು ತಿಳಿಸುವವರು ಯಾರೂ ಇಲ್ಲದಿರುವುದರಿಂದ ಸಮಾಜದಲ್ಲಿ ಉದ್ಯೋಗ ವ್ಯವಸ್ಥೆ ಅಧೋಗತಿ ಹಿಡಿದುಹೋಗಿದೆ. ಅದರಿಂದ ಪ್ರತಿಕಡೆ ಪಾಪವು ನಮೂದಿ ಸಲಾಗುತ್ತಿದೆ. ಪ್ರತಿ ಉದ್ಯೋಗಿ ತನಗೆಬರುವ ಕಾಣಿಸುವ ಹಣವನ್ನು ನೋಡಿಕೊಳ್ಳುತ್ತಿದ್ದಾನೆ ಹೊರತು, ತನಗೆ ಕಾಣಿಸದಂತೆ ಬರುವ ಪಾಪವನ್ನು ನೋಡುತ್ತಿಲ್ಲ. ಪಾಪ ಬರುತ್ತದೆನ್ನುವ ವಿಷಯವೇ ತಿಳಿಯದಂತೆ ಬದುಕುತ್ತಿದ್ದಾನೆ. ಅದರಿಂದ ಪಾಪಭೀತಿ ಸ್ವಲ್ಪವೂ ಇಲ್ಲದಂತೆ ಹೋಗಿದೆ. ಪಾಪ ಬರುತ್ತದೆಂದು,

ಅದರಿಂದ ರೋಗಗಳಾಗಿಯೊ, ಕಷ್ಟಗಳಾಗಿಯೊ, ಶರೀರದಲ್ಲಿನ ಬಾಧೆಗಳಾಗಿಯೊ ಶಿಕ್ಷೆಗಳು ತಪ್ಪುವುದಿಲ್ಲವೆಂದು ತಿಳಿಯದಂತೆ ಹೋಗಿದೆ. ಆದುದರಿಂದ ಪಾಪವೊಂದರ ಭಯ ಉಂಟಾಗುವಂತೆ, ಪಾಪ ಭಯವಿರುವಂತೆ ಪ್ರತಿ ಮನುಷ್ಯ ಸಕ್ರಮವಾಗಿ ನಡೆದುಕೊಳ್ಳುವಂತೆ ಮಾಡಬೇಕೆನ್ನುವ ಉದ್ದೇಶದಿಂದ ನಾವು ಈ ವಿಧವಾಗಿ ಬರೆಯಬೇಕಾಗಿ ಬಂದಿದೆ. **"ಬುದ್ಧಿ ಹೇಳುವವನು ಗುದ್ದಿ ಹೇಳಬೇಕಾಗಿರುತ್ತದೆನ್ನುವ"** ಹಿರಿಯರ ಮಾತಿನ ಪ್ರಕಾರ ನಾನು ಕೆಲವರಿಗೆ ವಿರುದ್ಧವಾಗಿ ಮಾನಾಡಿದಂತೆ ಕಾಣಿಸಿದರೂ, ನಾನು ಮಾತನಾಡುವುದು, ಬರೆಯುವುದೆಲ್ಲಾ ಅವರ ಒಳಿತುಗೋಸ್ಕರವೆಯೆಂದು ಹೇಳುತ್ತಿದ್ದೇನೆ. ನಾನು ಸತ್ಯವನ್ನು ಹೇಳುವುದರಿಂದ ಕೆಲವರಿಗೆ ನಾನು ಕೆಟ್ಟದಾಗಿ ಕಾಣಿಸುತ್ತೇನೆಂದು ನನಗೆ ಗೊತ್ತು. ಹೀಗೆ ಹೇಳುವುದರಿಂದ ನನಗೆ ಲಾಭ ಏನೂ ಇಲ್ಲ. ಆದರೂ ಸಮಾಜ ಶ್ರೇಯಸ್ಸಿಗಾಗಿ, ಸಮಾಜದಲ್ಲಿನ ಪ್ರತಿ ಮನುಷ್ಯ ದೇವರು ಎಂಬ ಜ್ಞಾಪಕ ಹೊಂದಿ ದೇವರಜ್ಞಾನದ ಕಡೆ ನಡೆಯುವುದಕ್ಕು, ಇದು ದೇವರ ಸೇವೆಯಾಗಿ ತಿಳಿದು ಹೇಳುತ್ತಿದ್ದೇನೆ ಹೊರತು ಇದರಲ್ಲಿ ನನ್ನ ಉದ್ದೇಶ ಏನೂ ಇಲ್ಲ.

ಇದರಲ್ಲಿ ಲೇಖನಗಳು ಹೇಳಿದ ವ್ಯಕ್ತಿಗಳಾಗಲಿ, ಲೇಖನದಲ್ಲಿನ ಸಮಾಚಾರವಾಗಲಿ, ಎಲ್ಲವೂ ಕಲ್ಪಿತವೇ ಹೊರತು ಯಾರನ್ನೂ ಉದ್ದೇಶಿಸಿ ಬರೆದಿರುವವು ಅಲ್ಲ. ದೈವಜ್ಞಾನ ನಿಮಿತ್ತವಾಗಿ ಬರೆದ ಲೇಖನಗಳೆ ಹೊರತು, ಯಾರನ್ನು ಹೇಳನಮಾಡುವುದಕ್ಕೆ ಬರೆಯಲಿಲ್ಲವೆಂದು ತಿಳಿಸುತ್ತಿದ್ದೇವೆ.

ಇಂತಿ

***ಆಚಾರ್ಯ ಪ್ರಬೋಧಾನಂದ ಯೋಗೀಶ್ವರರು***

***ಅಸತ್ಯವನ್ನು ಸಾವಿರಜನ ಹೇಳಿದರೂ ಅದು ಸತ್ಯ ಆಗುವುದಿಲ್ಲ.***
***ಸತ್ಯವನ್ನು ಸಾವಿರಜನ ಅಲ್ಲವೆಂದರೂ ಅದು ಅಸತ್ಯವಾಗುದಿಲ್ಲ.***

# ನಿನಗೆ ನನ್ನ ಲೇಖ




*Author :*

*The Only GURU of Three Religions*

*The Spiritual Emperor, Thraitha Theorem Originator*

**Sri Acharya Prabodhananda Yogeeshwarulu**

www.thraithashakam.org